RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ – IV | ಬೆಂಗಳೂರು, ಶನಿವಾರ, ಜೂನ್ ೧, ೨೦೧೩ (ಜ್ಯೇಷ್ಠ ೧೧, ಶಕ ವರ್ಷ ೧೯೩೫) | ನಂ. ೮೧೪ |
| **Part – IV** | **Bangalore, Saturday, June 1, 2013 (Jyeishta 11, Shaka Varsha 1935)** | **No. 814** |


**PERSONNEL AND ADMINISTRATIVE REFORMS SECRETARIAT (ELECTIONS)**

**NOTIFICATION**

**No. DPAR 59 CHUVISA 2013 (PART), BANGALORE, DATED: 1ST JUNE, 2013**

In pursuance of the provisions of Section 67 of the Representation of the People Act, 1951 (43 of 1951) the following declarations containing the name of the candidate elected in the Constituency referred to therein is published for general information.

**FORM 21C**
**(See Rule 64)**

**DECLARATION OF THE RESULT OF ELECTION UNDER SECTION 66 OF THE REPRESENTATION OF THE PEOPLE ACT, 1951**

Election to the Legislative Assembly of Karnataka State from the **210-PERIYAPATNA** Legislative Assembly Constituency.

In pursuance of the provisions contained in Section 66 of the Representation of the People Act, 1951, read with Rule 64 of the Conduct of Elections Rules, 1961, I declare that –

**Sri K. VENKATESH S/O. S. KARIYAPPA,**
**DODDEGOWDANAKOPPALU,**
**KITTURU POST, BETTADAPURA HOBLI,**
**PERIYAPATNA TALUK.**

Sponsored by **INDIAN NATIONAL CONGRESS** has been duly elected to fill the seat in that House from the above Constituency.

**Place: PERIYAPATNA**
**Date: 31-05-2013**

**A.B. BASAVARAJU**
Returning Officer,
210-Periyapatna Legislative Assembly Constituency.

By order and in the name of the Governor of Karnataka

**T. SHAMAIAH**
Joint Chief Electoral Officer &
Ex-Officio Additional Secretary to Govt.,
D.P.A.R. (Elections).

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III<br>Part – III | ಬೆಂಗಳೂರು, ಶನಿವಾರ, ಜೂನ್ ೧, ೨೦೧೩ (ಜ್ಯೇಷ್ಠ ೧೧, ಶಕ ವರ್ಷ ೧೯೩೫)<br>Bangalore, Saturday, June 1, 2013 (Jyeishta 11, Shaka Varsha 1935) | ನಂ. ೮೧೫<br>No. 815 |
|---|---|---|


**ಆಹಾರ ಸುರಕ್ಷತೆ ಆಯುಕ್ತರ ಕಾರ್ಯಾಲಯ**

ಸಾರ್ವಜನಿಕ ಆರೋಗ್ಯ ಸಂಸ್ಥೆ, ಶೇಷಾದ್ರಿ ರಸ್ತೆ, ಬೆಂಗಳೂರು – 560 001

**ಅಧಿಸೂಚನೆ**

**ಸಂಖ್ಯೆ: ಸಾಆಸಂ/ಎಫ್ಎಸ್ಎಸ್ಎ/ಅಸೂ/01/2013–14, ಬೆಂಗಳೂರು, ದಿನಾಂಕ: 30–05–2013**

ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆ – 2006 (ಕೇಂದ್ರ ಕಾಯ್ದೆ 34/2006) ರ ಸೆಕ್ಷನ್ 92ರ ಸಬ್ ಸೆಕ್ಷನ್ (2)ರ ಕ್ಲಾಸ್ (1) ರ ಅಡಿಯಲ್ಲಿ ಸೆಕ್ಷನ್ 26ನ್ನು ಓದಿಕೊಂಡಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಭಾರತ ಸರ್ಕಾರದ ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಪ್ರಾಧಿಕಾರವು ಆಹಾರ ಸುರಕ್ಷತೆ ಮತ್ತು ಗುಣಮಟ್ಟ (ನಿಷೇಧ ಮತ್ತು ಮಾರಾಟ ನಿರ್ಬಂಧ) ನಿಬಂಧನೆಗಳು, 2011ರನ್ನು ರಚಿಸಿದ್ದು, ನಿಬಂಧನೆ 2, 3, 4 ರಲ್ಲಿ ತಂಬಾಕು ಮತ್ತು ನಿಕೋಟಿನ್ ಘಟಕಾಂಶಗಳನ್ನೊಳಗೊಂಡ ಆಹಾರ ಪದಾರ್ಥಗಳನ್ನು ನಿಷೇದಿಸಿದೆ. ಗುಟ್ಕಾ ಮತ್ತು ಪಾನ್ ಮಸಾಲಗಳು, ತಂಬಾಕು ಮತ್ತು ನಿಕೋಟಿನ್ ಘಟಕಾಂಶಗಳನ್ನು ಒಳಗೊಂಡ ಆಹಾರ ಪದಾರ್ಥಗಳಾಗಿವೆ. ಆದುದರಿಂದ ಕರ್ನಾಟಕ ರಾಜ್ಯಾದಾದ್ಯಂತ ತಂಬಾಕು ಮತ್ತು ನಿಕೋಟಿನ್ ಘಟಕಾಂಶಗಳನ್ನೊಳಗೊಂಡ ಗುಟ್ಕಾ ಮತ್ತು ಪಾನ್ ಮಸಾಲ ಆಹಾರ ಪದಾರ್ಥಗಳನ್ನು ನಿಷೇಧಿಸಬೇಕಾಗಿದೆ. ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆಯಲ್ಲಿನ ಉಪಬಂಧಗಳನ್ನು ಮತ್ತು ಅದರಡಿಯಲ್ಲಿ ರಚಿತವಾಗಿರುವ ನಿಯಮಾವಳಿಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕರ್ನಾಟಕ ರಾಜ್ಯವು ಆಹಾರ ಸುರಕ್ಷತಾ ಆಯುಕ್ತರನ್ನು ನೇಮಿಸಿದೆ.

ಆದುದರಿಂದ, ಆಹಾರ ಸುರಕ್ಷತೆ ಮತ್ತು ಗುಣಮಟ್ಟ (ನಿಷೇಧ ಮತ್ತು ಮಾರಾಟ ನಿರ್ಬಂಧ) ನಿಬಂಧನೆಗಳು, 2011ರ ನಿಬಂಧನೆ 2.3.4 ರ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ತಂಬಾಕು ಮತ್ತು ನಿಕೋಟಿನ್ ಘಟಕಾಂಶಗಳನ್ನೊಳಗೊಂಡ ಗುಟ್ಕಾ ಮತ್ತು ಪಾನ್‌ಮಸಾಲ ಹಾಗೂ ಇತರೆ ಯಾವುದೇ ಹೆಸರಿನಲ್ಲಿ ಮಾರುಕಟ್ಟೆಯಲ್ಲಿ ಲಭ್ಯವಿರುವ ಗುಟ್ಕಾ ಮತ್ತು ಪಾನ್‌ಮಸಾಲ ಪದಾರ್ಥಗಳ ತಯಾರಿಕೆ, ಸಂಗ್ರಹಣೆ. ಮಾರಾಟ ಹಾಗೂ ವಿತರಣೆಯನ್ನು ಸಾರ್ವಜನಿಕರ ಆರೋಗ್ಯದ ಹಿತ ದೃಷ್ಟಿಯಿಂದ ಸಂಪೂರ್ಣವಾಗಿ ನಿಷೇಧಿಸಿದೆ.

**ವಿ.ಬಿ. ಪಾಟೀಲ್, ಐ.ಎ.ಎಸ್.**
ರಾಜ್ಯ ಆಹಾರ ಸುರಕ್ಷತಾ ಆಯುಕ್ತರು ಮತ್ತು
ಆಯುಕ್ತರು,
ಆರೋಗ್ಯ ಮತ್ತು ಕು.ಕ. ಸೇವೆಗಳು
ಬೆಂಗಳೂರು – 560 009

**OFFICE OF THE FOOD SAFETY COMMISSIONER**

**PUBLIC HEALTH INSTITUTE, SHESHADRI ROAD, BANGALORE-01**

**NOTIFICATION**

**NO. PHI/FSSA/NOT./01/2013-14, Bangalore, Dated: 30th May, 2013**

WHEREAS, regulation 2.3.4 of the Food Safety and Standards (Prohibition and Restrictions on Sales) Regulations, 2011 made by the Food Safety and Standards Authority of India in exercise of the powers conferred by clause (i) of sub-section (2) of section 92 of the Food Safety and Standards Act, 2006 (Central Act 34 of 2006) read with section 26 thereof, prohibits articles of food containing tobacco and nicotine which are used as ingredients, as they are injurious to health ;

AND WHEREAS, gutka and panmasala are articles of food in which tobacco and nicotine are widely used as ingredients ;

AND WHEREAS, it is expedient to prohibit gutka and panmasala in the entire State of Karnataka, being food products in which tobacco and nicotine are widely used as ingredients ;

AND WHEREAS, the Commissioner of Food Safety of the State is appointed by the State Government for efficient implementation of food safety and other requirements laid down under this Act and the rules and regulations made thereunder.

Now, THEREFORE, in pursuance of regulation 2.3.4 of the Food Safety and Standards (Prohibition and Restrictions on Sales) Regulations, 2011 the manufacture, storage, sale or distribution of gutka and panmasala containing tobacco or nicotine as ingredients, by whatsoever name it is available in the market, is hereby prohibited in the State of Karnataka with immediate effect in the interest of Public Health.

**V.B. PATIL, IAS**
Food Safety Commissioner &
Commissioner
Health and F.W. Services, Bangalore – 560 009

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A<br>Part – IV-A | ಬೆಂಗಳೂರು, ಸೋಮವಾರ, ಜೂನ್ ೩, ೨೦೧೩ (ಜ್ಯೇಷ್ಠ ೧೩, ಶಕ ವರ್ಷ ೧೯೩೫)<br>Bangalore, Monday, June 3, 2013 (Jyeishta 13, Shaka Varsha 1935) | ನಂ. ೮೧೬<br>No. 816 |
|---|---|---|

## ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂ: ಸಾರಿಇ 56 ಸಾಇಪ 2013, ಬೆಂಗಳೂರು, ದಿನಾಂಕ: 03–06–2013**

ಮೋಟಾರು ವಾಹನಗಳ ಅಧಿನಿಯಮ 1988 (ಕೇಂದ್ರ ಅಧಿನಿಯಮ ಸಂ.59/1988)ರ ಕಲಂ 67ರ ಉಪ ಕಲಂ (1)(i) ರಡಿ ಕರ್ನಾಟಕ ಸರ್ಕಾರವೂ ಹೊರಡಿಸಿದ ಅಧಿಸೂಚನೆ ಸಂ. ಸಾರಿಇ 300 ಸಾಇಪ 2007, ದಿ:18–02–2012 ರಲ್ಲಿ ರಾಜ್ಯದ ನಗರ ಪ್ರದೇಶಗಳಲ್ಲಿ ಹವಾ ನಿಯಂತ್ರಣ ರಹಿತ ಸಿಟಿ ಟ್ಯಾಕ್ಸಿಗಳಿಗೆ ಕನಿಷ್ಠ ಮತ್ತು ಗರಿಷ್ಠ ದರಗಳು ಮತ್ತು ಸಾಗಾಣಿಕೆ ದರಗಳನ್ನು ನಿಗದಿಪಡಿಸಿ ಕರ್ನಾಟಕ ರಾಜ್ಯ ಸಾರಿಗೆ ಪ್ರಾಧಿಕಾರಕ್ಕೆ ಮತ್ತು ಪ್ರಾದೇಶಿಕ ಸಾರಿಗೆ ಪ್ರಾಧಿಕಾರಗಳಿಗೆ ನಿರ್ದೇಶನ ನೀಡಿತ್ತು.

ಕೇಂದ್ರ ಸರ್ಕಾರವೂ ಕಾಲಕಾಲಕ್ಕೆ ಇಂಧನ ಬೆಲೆಗಳನ್ನು ಹೆಚ್ಚಿಸಿರುವುದರಿಂದ ಮತ್ತು ವಾಹನಗಳ ಬೆಲೆ ಮತ್ತು ನಿರ್ವಹಣಾ ವೆಚ್ಚಗಳು ಗಣನೀಯವಾಗಿ ಹೆಚ್ಚಾಗಿರುವುದರಿಂದ ಅಲ್ಲದೇ ವಿವಿಧ ಮಾದರಿಯ ಟ್ಯಾಕ್ಸಿಗಳು ಹೆಚ್ಚಿನ ಸಂಖ್ಯೆಯಲ್ಲಿ ಆಚರಣೆ ಮಾಡುತ್ತಿರುವುದನ್ನು ಗಮನದಲ್ಲಿಟ್ಟುಕೊಂಡು ಸಿಟಿ ಟ್ಯಾಕ್ಸಿ (ಮೋಟಾರ್ ಕ್ಯಾಬ್) ಗಳ ದರ ಮತ್ತು ಸಾಗಾಣಿಕೆ ದರಗಳನ್ನು ಪರಿಷ್ಕರಿಸುವಂತೆ ರಾಜ್ಯ ಸಾರಿಗೆ ಪ್ರಾಧಿಕಾರಕ್ಕೆ ಮತ್ತು ಪ್ರಾದೇಶಿಕ ಸಾರಿಗೆ ಪ್ರಾಧಿಕಾರಿಗಳಿಗೆ ನಿರ್ದೇಶನ ನೀಡುವುದು ಅಗತ್ಯವೆಂದೂ ಕರ್ನಾಟಕ ಸರ್ಕಾರವೂ ಪರಿಗಣಿಸಿದೆ.

ಅದರಂತೆ ಮೋಟಾರು ವಾಹನಗಳ ಅಧಿನಿಯಮ 1988ರ (ಕೇಂದ್ರ ಅಧಿನಿಯಮ 59/1988) 67ರ ಉಪ ಕಲಂ (1)(i) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ದಿ:18–02–2012 ರ ಅಧಿಸೂಚನೆಯಲ್ಲಿ ನೀಡಲಾದ ನಿರ್ದೇಶನಗಳಲ್ಲಿ ಟ್ಯಾಕ್ಸಿ ದರ ಮತ್ತು ಸಾಗಾಣಿಕೆ ದರಗಳಿಗೆ ಸಂಬಂಧಿಸಿದಂತೆ ಭಾಗಶ: ಮಾರ್ಪಡಿನೊಂದಿಗೆ ರಾಜ್ಯ ಸಾರಿಗೆ ಪ್ರಾಧಿಕಾರಕ್ಕೆ ಮತ್ತು ಪ್ರಾದೇಶಿಕ ಸಾರಿಗೆ ಪ್ರಾಧಿಕಾರಿಗಳಿಗೆ ಈ ಕೆಳಕಂಡಂತೆ ನಿರ್ದೇಶನವನ್ನು ನೀಡಿರುತ್ತದೆ.

**:ನಿರ್ದೇಶನಗಳು:**

| ಹವಾ ನಿಯಂತ್ರಣ ರಹಿತ ಸಿಟಿ ಟ್ಯಾಕ್ಸಿ | ಕನಿಷ್ಠ | ಪ್ರತಿ ಕಿ.ಮೀ.ಗೆ |
|---|---|---|
| ಬಾಡಿಗೆ ದರಗಳು | ರೂ. 70.00 (4 ಕಿ.ಮೀ.) | ರೂ. 14.50/– |
| ಕಾಯುವಿಕೆ ದರಗಳು | ಮೊದಲಿನ 20 ನಿಮಿಷಗಳವರೆಗೆ ಉಚಿತ. ನಂತರದ ಪ್ರತಿ 15 ನಿಮಿಷಗಳಿಗೆ ಅಥವಾ ಅದರ ಭಾಗಕ್ಕೆ ರೂ. 12/– | |
| ಲಗೇಜ್ ದರಗಳು | ಮೊದಲಿನ 120 ಕೆ.ಜಿ.ವರೆಗೆ ಉಚಿತ (ಸೂಟ್‌ಕೇಸ್, ಬೆಡ್ಡಿಂಗ್ ಇತ್ಯಾದಿ ವೈಯಕ್ತಿಕ ಲಗೇಜ್‌ಗಳು) ನಂತರದ ಪ್ರತಿ 20 ಕಿ.ಗ್ರಾ. ಗೆ ಅಥವಾ ಅದರ ಭಾಗಕ್ಕೆ ರೂ. 7/– | |
| ರಾತ್ರಿ ದರಗಳು | ರಾತ್ರಿ 12 ಗಂಟೆಯಿಂದ ಬೆಳಗಿನ 6 ಗಂಟೆಯವರೆಗೆ ಸಂಚರಿಸುವ ಟ್ಯಾಕ್ಸಿಗಳಿಗೆ ಪ್ರಯಾಣ ದರದ ಮೇಲೆ ಶೇಕಡ 10 ರಷ್ಟು ಹೆಚ್ಚು. | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಪ್ರಭುಶಂಕರ್**
ಪೀಠಾಧಿಕಾರಿ
ಸಾರಿಗೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A<br>Part – IV-A | ಬೆಂಗಳೂರು, ಮಂಗಳವಾರ, ಜೂನ್ ೪, ೨೦೧೩ (ಜ್ಯೇಷ್ಠ ೧೪, ಶಕ ವರ್ಷ ೧೯೩೫)<br>Bangalore, Tuesday, June 4, 2013 (Jyeishta 14, Shaka Varsha 1935) | ನಂ. ೮೧೭<br>No. 817 |
|---|---|---|

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 124 ಎಂಎಲ್‌ಆರ್ 2013, ಬೆಂಗಳೂರು, ದಿನಾಂಕ: 04–06–2013**

1979ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ) ನಿಯಮಾವಳಿಯ 68ನೇ ನಿಯಮದೊಂದಿಗೆ ಓದಲಾದ 1976ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ನಿಯಮಗಳ ಅಧಿನಿಯಮ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ: 14)ರ 32ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ದಿನಾಂಕ: 07–04–2013 ರಂದು ನಡೆದ ಉಪ ಚುನಾವಣೆಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಚುನಾಯಿತರಾದ ಅಭ್ಯರ್ಥಿಯ ಹೆಸರನ್ನು ಈ ಮೂಲಕ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| ವಾರ್ಡ್ ಸಂಖ್ಯೆ / ಹೆಸರು | ಚುನಾಯಿತ ಅಭ್ಯರ್ಥಿಯ ವಿವರ | | ಅಭ್ಯರ್ಥಿಯ ಪಕ್ಷ |
|---|---|---|---|
| | ಹೆಸರು | ವಿಳಾಸ | |
| 56 / ಎ. ನಾರಾಯಣಪುರ | ಶ್ರೀಮತಿ ವಿಜಯ ಎಸ್.ಎಸ್. ಪ್ರಸಾದ್ | ನಂ. 5, ಗಿಡ್ಡಮ್ಮ ಲೇಔಟ್,<br>ಎ. ನಾರಾಯಣಪುರ,<br>ಬೆಂಗಳೂರು – 560 016 | ಭಾರತೀಯ ಜನತಾ ಪಕ್ಷ (ಬಿ.ಜೆ.ಪಿ.) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ವಿ. ರಾಮಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ


# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A<br>Part – IV-A | ಬೆಂಗಳೂರು, ಬುಧವಾರ, ಜೂನ್ ೫, ೨೦೧೩ (ಜ್ಯೇಷ್ಠ ೧೫, ಶಕ ವರ್ಷ ೧೯೩೫)<br>Bangalore, Wednesday, June 5, 2013 (Jyeishta 15, Shaka Varsha 1935) | ನಂ. ೮೧೮<br>No. 818 |
|---|---|---|


## ನಗರಾಭಿವೃದ್ಧಿ ಸಚಿವಾಲಯ

### ಕರಡು ಅಧಿಸೂಚನೆ

**ಸಂಖ್ಯೆ: ನಅಇ 313 ಎಂಎಲ್‌ಆರ್ 2012, ಬೆಂಗಳೂರು, ದಿನಾಂಕ: 04–06–2013**

ಸರ್ಕಾರದ ಮಾರ್ಗಸೂಚಿ ಸಂಖ್ಯೆ: ನಅಇ 310 ಎಂಎಲ್‌ಆರ್ 2012 ದಿನಾಂಕ 09.11.2012 ರಲ್ಲಿ ಸ್ಪಷ್ಟಪಡಿಸಿರುವಂತೆ ಸರ್ಕಾರವು ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಪುರಸಭೆ ಕಾಯ್ದೆ 1964ರ ಕಲಂ 13 ರನ್ವಯ (Karnataka Act 22 of 1964) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 13 ಶಾಸನ 2012, ದಿನಾಂಕ 30.08.2012 ರನ್ವಯ (Karnataka Act No. 32 of 2012) ಈ ಕೆಳಕಂಡ ನಗರ ಸ್ಥಳೀಯ ಸಂಸ್ಥೆಗೆ ಸಂಬಂಧಿಸಿದಂತೆ ಕರಡು ಅಧಿಸೂಚನೆ ಹೊರಡಿಸಲಾಗಿದೆ.

1. **ಮಡಿಕೇರಿ** ನಗರಸಭೆಯ ವಾರ್ಡುಗಳ ಸಂಖ್ಯೆ: **23 (ಇಪ್ಪತ್ತಮೂರು)**
2. ಪ್ರತಿ ವಾರ್ಡುಗಳ ವಿಸ್ತೀರ್ಣದ ವಿವರವನ್ನು ಅನುಬಂಧದ ಕಲಂ 3 ರಲ್ಲಿ ವಿವರಿಸಿದೆ.
3. ಪ್ರತಿ ವಾರ್ಡಿಗೆ ತಲಾ ಒಂದು ಸ್ಥಾನವನ್ನು ಮೀಸಲಿಡಲಾಗಿದೆ.
4. ಪ್ರತಿ ವಾರ್ಡಿಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಹಿಂದುಳಿದ ವರ್ಗ / ಸಾಮಾನ್ಯ ಸ್ಥಾನವನ್ನು ಮತ್ತು ಆಯಾ ವರ್ಗದ ಮಹಿಳೆಯರ ಸ್ಥಾನವನ್ನು ಈ ಅಧಿಸೂಚನೆಯ ಅನುಬಂಧದಲ್ಲಿ ನಿಗದಿಪಡಿಸಿದೆ.

ಈ ಕರಡು ಅಧಿಸೂಚನೆಯನ್ನು ಸಾರ್ವಜನಿಕರ ಅವಗಾಹನೆಗಾಗಿ ಈ ಮೂಲಕ ಪ್ರಕಟಿಸಲಾಗಿದೆ. ಕರಡು ಅಧಿಸೂಚನೆಯನ್ನು ಸರ್ಕಾರದ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 7 ದಿನಗಳ ಒಳಗಾಗಿ ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆಯನ್ನು ಸಲ್ಲಿಸಲು ಇಚ್ಛಿಸುವ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ದಾಖಲೆಗಳೊಂದಿಗೆ ನಿಗದಿತ ದಿನಾಂಕಕ್ಕೆ ಮೊದಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ವಿ. ರಾಮಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

### ಅನುಬಂಧ

### ಮಡಿಕೇರಿ ನಗರಸಭೆಯ ವಾರ್ಡುಗಳ ವಿವರ

| ಕ್ರ. ಸಂ. | ವಾರ್ಡು ಸಂಖ್ಯೆ ಮತ್ತು ಹೆಸರು | ಚೆಕ್ಕುಬಂದಿ (ವಿಸ್ತೀರ್ಣ) | ಮೀಸಲಾತಿ |
|---|---|---|---|
| 1 | ಮಡಿಕೇರಿ–1<br>ಬ್ಲಾಕ್ ನಂ–14<br>(ಡೈರಿಫಾರಂ, ರೈಫಲ್ ರೇಂಜ್, ಸುಬ್ರಮಣ್ಯ ನಗರ, ಡಿಎಆರ್ ಕ್ವಾಟ್ರಸ್, ಎಫ್.ಎಂ.ಸಿ.ಕಾಲೇಜು ಹಿಂಭಾಗ ರಸ್ತೆ, ವಿದ್ಯಾನಗರ ಹೌಸಿಂಗ್ ಬೋರ್ಡ್) | ಫೀಲ್ಡ್‌ಮಾರ್ಷಲ್ ಕಾರ್ಯಪ್ಪ ಕಾಲೇಜಿನ ಹಿಂಭಾಗದ ರಸ್ತೆ ಅಂದರೆ ಶ್ರೀ ಕೆ.ಜಿ. ಸುಬ್ಬಯ್ಯನವರ ಮನೆಯಿಂದ ಪ್ರಾರಂಭಗೊಂಡು ಅಂದರೆ ಮನೆ ನಂ.14–ಬಿ–1(1ಎ) ರಸ್ತೆಯ ಬಲಭಾಗಕ್ಕಾಗಿ ರೇಸ್‌ಕೋರ್ಸ್ ರಸ್ತೆಯ ಕೃಷಿ ಸಂಶೋಧನಾ ಇಲಾಖೆಗೆ ಬಂದು ಅಲ್ಲಿಂದ ಬಲಕ್ಕೆ ಹಿಂದೂ ಸ್ಮಶಾನಕ್ಕಾಗಿ ನೀರು ಶುದ್ಧೀಕರಣ ಕೇಂದ್ರವನ್ನು ತಲುಪಿ ಅಲ್ಲಿಂದ ಬಲಕ್ಕೆ ತಿರುಗಿ ಕಡಂಗದ ಮೂಲಕ ಹಾದು ಕೆ. ಬಾಡಗ ಗ್ರಾಮಕ್ಕಾಗಿ ಎಡಕ್ಕೆ ತಿರುಗಿ ಹಳೆಯ ಪುಟಾಣಿ ರೈಲು ರಸ್ತೆಗಾಗಿ ಪ್ರಾರಂಭದ ಮನೆ ಸೇರುವುದು<br>ಉತ್ತರಕ್ಕೆ : ವಾರ್ಡ್ ನಂ.9<br>ದಕ್ಷಿಣಕ್ಕೆ : ನಗರಸಭೆಯ ಸರಹದ್ದು<br>ಪೂರ್ವಕ್ಕೆ : ನಗರಸಭೆಯ ಸರಹದ್ದು<br>ಪಶ್ಚಿಮಕ್ಕೆ : ವಾರ್ಡ್ ನಂ.13 | ಸಾಮಾನ್ಯ (ಮಹಿಳೆ) |

| ಕ್ರ. ಸಂ. | ವಾರ್ಡು ಸಂಖ್ಯೆ ಮತ್ತು ಹೆಸರು | ಚೆಕ್ಕುಬಂದಿ (ವಿಸ್ತೀರ್ಣ) | ಮೀಸಲಾತಿ |
|---|---|---|---|
| 2 | ಮಡಿಕೇರಿ–2<br>ಬ್ಲಾಕ್ ನಂ–01<br>(ಮಹದೇವಪೇಟೆ ಮುಖ್ಯ ರಸ್ತೆ, ಮುತ್ತಪ್ಪ ದೇವಸ್ಥಾನ ರಸ್ತೆ, ಕೋದಂಡರಾಮ ದೇವಸ್ಥಾನ ರಸ್ತೆ) | ನಗರಸಭೆ ಬ್ಲಾಕ್ ನಂ.1ರ ಮುತ್ತಪ್ಪ ದೇವಸ್ಥಾನದ ಎದುರು ಭಾಗದ ಮನೆ ನಂ.1–1ರ ಶ್ರೀಕಟ್ರತಂಡ ಚೆಣ್ಣಪ್ಪನವರ ಮನೆಗಾಗಿ ಪ್ರಾರಂಭಗೊಂಡು ಎ.ವಿ. ಶಾಲೆಗಾಗಿ ಬಂದು ಶ್ರೀ ಎಂ.ಸಿ. ಮಂಜುನಾಥರವರ ಮನೆಗಾಗಿ ಮಹದೇವಪೇಟೆ ಮುಖ್ಯ ರಸ್ತೆಗಾಗಿ ಅಲ್ಲಿಂದ ಮಾರುಕಟ್ಟೆವರೆಗಿನ ಅಂದರೆ ಡಾ॥ ಕೆ.ಕೆ. ಅಪ್ಪಾಜಿರ ಮನೆಗಾಗಿ (ರಸ್ತೆಯ ಬಲಕ್ಕೆ ತಿರುಗಿ ಅಲ್ಲಿಂದ ಮುಂದುವರೆದು ಕೆಂಡದ ಗುಂಡಿಗಾಗಿ ಶ್ರೀ. ಟಿ.ಎ. ಇಬ್ರಾಹಿಂರವರ ಮನೆಗಾಗಿ ಅಲ್ಲಿಂದ ಬಲಕ್ಕೆ ತಿರುಗಿ ಮುತ್ತಪ್ಪ ದೇವಸ್ಥಾನಕ್ಕಾಗಿ (ಮಲ್ಲಿಕಾರ್ಜುನ ನಗರ) ಮುತ್ತಪ್ಪ ದೇವಸ್ಥಾನ ರಸ್ತೆಯ ಬಲಭಾಗದ ಮನೆಯನ್ನು ಆವರಿಸಿಕೊಂಡು) ಪ್ರಾರಂಭದ ಮನೆಯನ್ನು ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ.22<br>ದಕ್ಷಿಣಕ್ಕೆ : ವಾರ್ಡ್ ನಂ. 5<br>ಪೂರ್ವಕ್ಕೆ : ವಾರ್ಡ್ ನಂ. 3<br>ಪಶ್ಚಿಮಕ್ಕೆ : ವಾರ್ಡ್ ನಂ.8 | ಹಿಂದುಳಿದ (ಬಿ) ಮಹಿಳೆ |
| 3 | ಮಡಿಕೇರಿ–3<br>ಬ್ಲಾಕ್ ನಂ–24, ಬ್ಲಾಕ್ ನಂ–02, ಬ್ಲಾಕ್ ನಂ–03<br>(ಗಣಪತಿ ಬೀದಿ, ಮಹದೇವಪೇಟೆ ಮುಖ್ಯ ರಸ್ತೆ, ದಾಸವಾಳ ರಸ್ತೆ) | ಮಹದೇವಪೇಟೆಯಲ್ಲಿ ಬಾಷರವರ ಅಂಗಡಿಯ ಎದುರುಭಾಗದಲ್ಲಿ ಮೆಹರುನ್ನಿಸರವರ ಮನೆಯಿಂದ ಪ್ರಾರಂಭಗೊಂಡು ಮುಖ್ಯರಸ್ತೆಗಾಗಿ ರಸ್ತೆ ಎಡಭಾಗದ ಮನೆಗಳನ್ನು ಸೇರಿಸಿ ಕೊಂಡಂತೆ ಮಾರುಕಟ್ಟೆಯ ಎದುರುಭಾಗದ ಮೆಟ್ಟಿಲುಗಳವರೆಗೆ ತಲುಪಿ ಅಲ್ಲಿಂದ ಎಡಕ್ಕೆ ತಿರುಗಿ ಗಣಪತಿ ಬೀದಿಗಳ ವರೆಗೆ ತಲುಪಿ ಅಲ್ಲಿಂದ ಎಡಕ್ಕೆ ತಿರುಗಿ ಗಣಪತಿ ಬೀದಿ ಸೇರಿ ಅಲ್ಲಿಂದ ಪುನಃ ಎಡಕ್ಕೆ ತಿರುಗಿ ನಗರಸಭೆ ಬ್ಲಾಕ್ ನಂ.2 ಮನೆಗಳನ್ನು ಸೇರಿಸಿಕೊಂಡು ಗಣಪತಿ ಬೀದಿ ಬ್ಲಾಕನ್ನು ಅಂದರೆ 3ನ್ನು ಶ್ರೀ ಮಹಾಬಲ ಭಂಡಾರಿ ಓಣಿಗಾಗಿ (ಮನೆ ನಂ. 3–27) ಇಳಿದು ಸಾರ್ವಜನಿಕ ತೋಡಿಗಾಗಿ ಪ್ರಾರಂಭದ ಮನೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ.22<br>ದಕ್ಷಿಣಕ್ಕೆ : ವಾರ್ಡ್ ನಂ.6<br>ಪೂರ್ವಕ್ಕೆ : ವಾರ್ಡ್ ನಂ.4<br>ಪಶ್ಚಿಮಕ್ಕೆ : ವಾರ್ಡ್ ನಂ.2 | ಸಾಮಾನ್ಯ (ಮಹಿಳೆ) |
| 4 | ಮಡಿಕೇರಿ–4<br>ಬ್ಲಾಕ್ ನಂ–03 (ಬಾಗಶಃ) ಬ್ಲಾಕ್ ನಂ–06<br>(ದಾಸವಾಳ ಭಾಗಶಃ, ಗಣಪತಿ ಬೀದಿ (ಬಾಗಶಃ)) | ಗಣಪತಿಬೀದಿಯ ಬ್ಲಾಕ್ ನಂ.3 ಮನೆ ನಂ.28.1 ರಿಂದ ಪ್ರಾರಂಭಗೊಂಡು ಗಣಪತಿ ಬೀದಿ ಚೌಕಿಗಾಗಿ ರಸ್ತೆಯ ಎಡ ಭಾಗದ ಮನೆಗಳನ್ನು ಸೇರಿಸಿಕೊಂಡು ಹೋಟೆಲ್ ನ್ಯೂ ಚಿತ್ರದ ತೋಡಿನವರೆಗೆ ಬಂದು ಅಲ್ಲಿಂದ ಎಡಕ್ಕೆ ತಿರುಗಿ ದಾಸವಾಳ ರಸ್ತೆಗಾಗಿ ವೈವಸ್ ನರ್ಸಿಂಗ್ ಹೋಂಗಾಗಿ ಮುಂದೆ ಸಾಗಿ ಹೋಟೆಲ್ ಕೂರ್ಗ್ ಸೈಡ್ ಪಕ್ಕದ ನಗರಸಭಾ ವಸತಿ ಗೃಹಕ್ಕಾಗಿ ಸಾರ್ವಜನಿಕ ತೋಡು ತಲುಪಿ ಅಲ್ಲಿಂದ ಎಡಕ್ಕೆ ತಿರುಗಿ ತೋಡಿನ ಮುಖಾಂತರ ಹಾದು ಶ್ರೀ ಮಹಾಬಲ ಭಂಡಾರಿಯವರ ಮನೆ ಓಣಿ ಮೂಲಕ ಪ್ರಾರಂಭದ ಮನೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ.3<br>ದಕ್ಷಿಣಕ್ಕೆ : ವಾರ್ಡ್ ನಂ.10 ಮತ್ತು 11<br>ಪೂರ್ವಕ್ಕೆ : ವಾರ್ಡ್ ನಂ.20<br>ಪಶ್ಚಿಮಕ್ಕೆ : ವಾರ್ಡ್ ನಂ.3 ಮತ್ತು 6 | ಸಾಮಾನ್ಯ (ಮಹಿಳೆ) |
| 5 | ಮಡಿಕೇರಿ–5<br>ಬ್ಲಾಕ್ ನಂ–05, ಬ್ಲಾಕ್ ನಂ–04<br>(ಮಹದೇವಪೇಟೆ, ಮಕ್ಕಾನ್‌ಗಲ್ಲಿ, ಕನಕದಾಸ ರಸ್ತೆ ಮತ್ತು ಹಿಲ್ ರಸ್ತೆ) | ನಗರಸಭೆ ಹಸಿ ಮೀನು ಮಾರುಕಟ್ಟೆಯಿಂದ ಪ್ರಾರಂಭಗೊಂಡು ಮಹದೇವಪೇಟೆ ತಲುಪಿ ಮಾರುಕಟ್ಟೆಯ ಎದುರುಭಾಗದ ರಸ್ತೆಗಾಗಿ ಇಳಿದು, ಗಣಪತಿ ಬೀದಿ ತಲುಪಿ ಇಂದಿರಾ ಗಾಂಧಿ ವೃತ್ತ (ಚೌಕಿ) ಕಡೆಗೆ ನಡೆದು ಬಲಭಾಗದ ಮನೆಗಳನ್ನು ಆವರಿಸಿಕೊಂಡು, ಮಹದೇವಪೇಟೆಗಾಗಿ ಮೇಲಕ್ಕೆ ಬಂದು, ಹಲೀಮಾ ಕಾಂಪ್ಲೆಕ್ಸ್‌ನಿಂದ ಎಡಕ್ಕೆ ತಿರುಗಿ ಲಕ್ಷ್ಮಿ ಅಕ್ಕಿ ಗಿರಣಿಗಾಗಿ ಹಿಲ್‌ರಸ್ತೆಯನ್ನು ತಲುಪಿ ಬಲಭಾಗದ ಮನೆಗಳನ್ನು ಒಳಗೊಂಡು ಪ್ರಾರಂಭ ಹಸಿ ಮೀನು ಮಾರುಕಟ್ಟೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ.2<br>ದಕ್ಷಿಣಕ್ಕೆ : ವಾರ್ಡ್ ನಂ.6<br>ಪೂರ್ವಕ್ಕೆ : ವಾರ್ಡ್ ನಂ.4<br>ಪಶ್ಚಿಮಕ್ಕೆ : ವಾರ್ಡ್ ನಂ. 6 | ಹಿಂದುಳಿದ ವರ್ಗ (ಬಿ) |

| ಕ್ರ. ಸಂ. | ವಾರ್ಡು ಸಂಖ್ಯೆ ಮತ್ತು ಹೆಸರು | ಚೆಕ್ಕುಬಂದಿ (ವಿಸ್ತೀರ್ಣ) | ಮೀಸಲಾತಿ |
|---|---|---|---|
| 6 | ಮಡಿಕೇರಿ–6<br>ಬ್ಲಾಕ್ ನಂ–07, ಬ್ಲಾಕ್ ನಂ–04 (ಭಾಗಶಃ)<br>(ರಾಣಿಪೇಟೆ, ಮಹದೇವಪೇಟೆ (ಭಾಗಶಃ), ಹಿಲ್ ರಸ್ತೆ (ಭಾಗಶಃ)) | ಇಂದಿರಾಗಾಂಧಿ ವೃತ್ತದಲ್ಲಿ ಶೃಂಗಾರ್ ಅಂಗಡಿಯಿಂದ ಪ್ರಾರಂಭಗೊಂಡು ಕಾಲೇಜು ರಸ್ತೆಗಾಗಿ ಮುಂದಕ್ಕೆ ಸಾಗಿ ರಾಣಿಪೇಟೆಗೆ ತಿರುಗಿ ನಗರಸಭಾ ಪೌರಕಾರ್ಮಿಕರ ವಸತಿ ಗೃಹಕ್ಕಾಗಿ ನಡೆದು ಬಲಭಾಗದ ಮನೆಗಳನ್ನು ಆವರಿಸಿಕೊಂಡು ತಾಹಾ ಇಂಜಿನಿಯರಿಂಗ್ ವರ್ಕ್ಸ್‌ಗಾಗಿ ಹಸಿ ಮೀನು ಮಾರುಕಟ್ಟೆಯಿಂದ ಹಿಲ್‌ರಸ್ತೆಗಾಗಿ ನಡೆದು ಕನಕದಾಸ ರಸ್ತೆಗಾಗಿ ಹಳೇ ಲಕ್ಷ್ಮಿ ಅಕ್ಕಿ ಗಿರಣಿಗಾಗಿ ಹಲೀಮಾ ಕಾಂಪ್ಲೆಕ್ಸ್‌ಗಾಗಿ ಮಹದೇವಪೇಟೆ ತಲುಪಿ ಬಲಕ್ಕೆ ತಿರುಗಿ ಪ್ರಾರಂಭದ ಶೃಂಗಾರ್ ಅಂಗಡಿಗೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ.8<br>ದಕ್ಷಿಣಕ್ಕೆ : ವಾರ್ಡ್ ನಂ.10<br>ಪೂರ್ವಕ್ಕೆ : ವಾರ್ಡ್ ನಂ.5<br>ಪಶ್ಚಿಮಕ್ಕೆ : ವಾರ್ಡ್ ನಂ.7 ಮತ್ತು 8 | ಹಿಂದುಳಿದ ವರ್ಗ (ಎ) (ಮಹಿಳೆ) |
| 7 | ಮಡಿಕೇರಿ–7<br>ಬ್ಲಾಕ್ ನಂ–10, ಬ್ಲಾಕ್ ನಂ–07 (ಭಾಗಶಃ) ಬ್ಲಾಕ್ ನಂ–08, ಬ್ಲಾಕ್ ನಂ–09, ಬ್ಲಾಕ್ ನಂ–14<br>(ರಾಣಿಪೇಟೆ, ಕಾನ್ವಂಟ್ ರಸ್ತೆ, ಮಲ್ಲಿಕಾರ್ಜುನನಗರ) | ರಾಣಿಪೇಟೆಯಲ್ಲಿ ಶ್ರೀ ಕರ್ಕೆರವರ ಮನೆಯಿಂದ ಪ್ರಾರಂಭಗೊಂಡು ರಾಣಿಪೇಟೆ ಕಾಲೇಜು ರಸ್ತೆಗಾಗಿ ಇಳಿದು ಬಲಭಾಗದ ಮನೆಗಳನ್ನು ಒಳಗೊಂಡು ಕಾಲೇಜು ರಸ್ತೆಯಿಂದ ಎಡಭಾಗಕ್ಕೆ ತಿರುಗಿ ಕಾವೇರಿ ಕಲ್ಯಾಣ ಮಂಟಪಕ್ಕಾಗಿ ಬಲಭಾಗದ ಮನೆಗಳನ್ನು ಆವರಿಸಿಕೊಂಡು ವೆಬ್ಸ್ ಬಳಿಯ ಸೇತುವೆಗಾಗಿ ಹಳೇ ಪೊಲೀಸು ವಸತಿಗೃಹಗಳನ್ನು ಸೇರಿಸಿಕೊಂಡಂತೆ ಸ್ಟೀವರ್ಟ್ ಹಿಲ್ ರಸ್ತೆ, ರೇಸ್‌ಕೋರ್ಸ್ ರಸ್ತೆಗೆ ಸೇರಿ ಅಲ್ಲಿಂದ ಎಡಕ್ಕೆ ತಿರುಗಿ ಐ.ಟಿ.ಐ. ಜಂಕ್ಷನ್‌ವರೆಗೆ ಮುಂದುವರಿದು ಬಲಕ್ಕೆ ತಿರುಗಿ ಕೆನರಾ ಬ್ಯಾಂಕ್ ಕಟ್ಟಡವನ್ನು ಒಳಗೊಂಡು ವಾರ್ಡ್ ನಂ. 9ರ ಸರಹದ್ದಿನಲ್ಲಿ ಮುಂದುವರಿದು ಶ್ರೀ ಬೋಸ್ ರವರ ಮನೆಗಾಗಿ ಬಲಭಾಗದ ಮನೆಗಳನ್ನು ಒಳಗೊಂಡು ಕಾನ್ವೆಂಟ್ ಗ್ರೌಂಡ್‌ಗಾಗಿ ಕಾವೇರಿ ಲೇಔಟನ್ನು ಆವರಿಸಿಕೊಂಡು ತೋಡಿಗಾಗಿ ಪ್ರಾರಂಭದ ಶ್ರೀಕರ್ಕೆರವರ ಮನೆಗೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ.9<br>ದಕ್ಷಿಣಕ್ಕೆ : ವಾರ್ಡ್ ನಂ.13<br>ಪೂರ್ವಕ್ಕೆ : ವಾರ್ಡ್ ನಂ.8<br>ಪಶ್ಚಿಮಕ್ಕೆ : ವಾರ್ಡ್ ನಂ.1 | ಪರಿಶಿಷ್ಟ ಜಾತಿ (ಮಹಿಳೆ) |
| 8 | ಮಡಿಕೇರಿ–8<br>ಬ್ಲಾಕ್ ನಂ–08 (ಭಾಹಶಃ) ಬ್ಲಾಕ್ ನಂ–25,<br>(ರಾಣಿಪೇಟೆ, ಮಲ್ಲಿಕಾರ್ಜುನನಗರ) | ಮುತ್ತಪ್ಪ ದೇವಾಲದಿಂದ ಪ್ರಾರಂಭಗೊಂಡು ಕೋದಂಡರಾಮ ದೇವಾಲಯಕ್ಕಾಗಿ ಮುಂದುವರೆದು ಡಾ॥ ಅಂಬೇಡ್ಕರ್ ಬಡಾವಣೆ ಆವರಿಸಿಕೊಂಡು ರಾಣಿಪೇಟೆ ಕಾಲೇಜು ರಸ್ತೆ ಮುಂದುವರೆದು ಮುಸಲ್ಮಾನರ ಸ್ಮಶಾನವನ್ನು ಒಳಗೊಂಡು ಬಲಕ್ಕೆ ತಿರುಗಿ ವಾರ್ಡ್ ನಂ. 7 ಸರಹದ್ದಿನಲ್ಲಿ ಮುಂದುವರೆದು ಕಾನ್ವೆಂಟ್ ಗ್ರೌಂಡ್‌ನ್ನು ತಲುಪಿ ಬಲಕ್ಕೆ ತಿರುಗಿ ಮುತ್ತಪ್ಪ ದೇವಾಲಯದ ರಸ್ತೆಯಲ್ಲಿ ಮುಂದುವರೆದು ಬಲಭಾಗದ ಮನೆಗಳನ್ನು ಒಳಗೊಂಡು ಪ್ರಾರಂಭದ ಮುತ್ತಪ್ಪ ದೇವಾಲಯಕ್ಕೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ.22<br>ದಕ್ಷಿಣಕ್ಕೆ : ವಾರ್ಡ್ ನಂ.6<br>ಪೂರ್ವಕ್ಕೆ : ವಾರ್ಡ್ ನಂ.7<br>ಪಶ್ಚಿಮಕ್ಕೆ : ವಾರ್ಡ್ ನಂ.2 | ಸಾಮಾನ್ಯ |
| 9 | ಮಡಿಕೇರಿ–9<br>ಬ್ಲಾಕ್ ನಂ–09 (ಭಾಗಶಃ) ಬ್ಲಾಕ್ ನಂ–14 (ಭಾಗಶಃ), ಬ್ಲಾಕ್ ನಂ–08 (ಭಾಗಶಃ))<br><br>(ಕಾಲೇಜು ರಸ್ತೆ, ಭಗವತಿನಗರ, ಐ.ಟಿ.ಐ. ಹೌಸಿಂಗ್ ಬೋರ್ಡ್) | ಐ.ಟಿ.ಐ. ಜಂಕ್ಷನ್‌ನಿಂದ ಪ್ರಾರಂಭಗೊಂಡು ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜಿಗಾಗಿ ಮುಂದುವರೆದು ಹಳೇ ಪಟಾಣಿ ರೈಲು ವಠಾರವನ್ನು ಆವರಿಸಿಕೊಂಡು ಗಾಳಿಬೀಡು ಮಡಿಕೇರಿ ರಸ್ತೆಗಾಗಿ ಮುಂದುವರೆದು ಭಗವತಿ ನಗರವನ್ನು ಆವರಿಸಿಕೊಂಡು ಮುತ್ತಪ್ಪ ಟೆಂಪಲ್ ಜಂಕ್ಷನ್‌ನಿಂದ ಎಡಕ್ಕೆ ಕಾನ್ವೆಂಟ್ ರಸ್ತೆಗಾಗಿ ತಿರುಗಿ ಬಲಭಾಗದ ಮನೆಗಳನ್ನು ಒಳಗೊಂಡು ಕಾನ್ವೆಂಟ್ ಗ್ರೌಂಡ್‌ನಿಂದ ಬಲಕ್ಕೆ ಗಾಳಿಬೀಡು ರಸ್ತೆಗೆ ತಿರುಗಿ ಶ್ರೀ ಬೋಸ್‌ರವರ ಮನೆಗಾಗಿ ಮಣ್ಣಿನ ರಸ್ತೆವರೆಗೆ ಮುಂದುವರಿದು ಬಲಭಾಗದ ಮನೆಗಳನ್ನು ಒಳಗೊಂಡು ಪ್ರಾರಂಭದ ಐ.ಟಿ.ಐ. ಜಂಕ್ಷನ್ ಸೇರುವುದು.<br>ಉತ್ತರಕ್ಕೆ : ನಗರಸಭೆ ಸರಹದ್ದು<br>ದಕ್ಷಿಣಕ್ಕೆ : ವಾರ್ಡ್ ನಂ.1<br>ಪೂರ್ವಕ್ಕೆ : ನಗರಸಭೆ ಸರಹದ್ದು<br>ಪಶ್ಚಿಮಕ್ಕೆ : ವಾರ್ಡ್ ನಂ.7 | ಪರಿಶಿಷ್ಟ ಪಂಗಡ (ಮಹಿಳೆ) |

| ಕ್ರ. ಸಂ. | ವಾರ್ಡು ಸಂಖ್ಯೆ ಮತ್ತು ಹೆಸರು | ಚೆಕ್ಕುಬಂದಿ (ವಿಸ್ತೀರ್ಣ) | ಮೀಸಲಾತಿ |
|---|---|---|---|
| 10 | ಮಡಿಕೇರಿ–10<br>ಬ್ಲಾಕ್ ನಂ–11, ಬ್ಲಾಕ್ ನಂ–12, ಬ್ಲಾಕ್ ನಂ–13<br>(ಕಾಲೇಜು ರಸ್ತೆ, ಅಪ್ಪಚ್ಚು ಕವಿ ರಸ್ತೆ, ಪೆನ್ಸನ್ ಲೇನ್ ಮತ್ತು ಶಾಸ್ತ್ರಿನಗರ) | ನಗರಸಭಾ ಬ್ಲಾಕ್ ನಂ.11 ರ ಎ.ಯು. ಮುದ್ದೂರ ಕಾರ್ಯಪ್ಪನವರ ಮನೆಯಿಂದ ಪ್ರಾರಂಭಗೊಂಡು ಕಾಲೇಜು ರಸ್ತೆ ಚೌಕಿ ವೃತ್ತಕ್ಕೆ ಹಾದು ಖಾಸಗಿ ಬಸ್ ನಿಲ್ದಾಣದ ಮಾರ್ಗವಾಗಿ ಕೂಡಿಗೆ ಹಾಲು ಡೈರಿನ ಮಳಿಗೆಗಾಗಿ (ರಸ್ತೆಯ ಬಲಭಾಗದ ಎಲ್ಲಾ ಮನೆಗಳನ್ನು ಸೇರಿಸಿಕೊಂಡಂತೆ) ಮೆಟ್ಟಿಲುಗಳ ಮುಖಾಂತರ ಬಲಕ್ಕೆ ತಿರುಗಿ ದಂಡಿನ ಮಾರಿಯಮ್ಮ ದೇವಾಲಯಕ್ಕೆ ಎಡಕ್ಕೆ ತಿರುಗಿ ಚೈಲ್ಡ್‌ಕೇರ್ ಕ್ಲಿನಿಕ್ ನಿಂದ ಮುಂದಕ್ಕೆ ಲಸ್ಕರ್ ಮಸೀದಿಗಾಗಿ ರಸ್ತೆಗಾಗಿ ಮುಂದುವರೆದು ಹಳೇ ಇಂಡೇನ್‌ಗ್ಯಾಸ್ ಮೆಟ್ಟಿಲುಗಾಗಿ ಕೆಳಕ್ಕೆ ಇಳಿದು ಕೊಹಿನೂರು ರಸ್ತೆಗಾಗಿ ಅಲ್ಲಿಂದ ಹಳೇ ಗ್ಯಾಸ್ ಆಫೀಸ್‌ಗಾಗಿ ರೇಸ್ ಕೋರ್ಸ್ ರಸ್ತೆ ಸೇರುವುದು. ರೇಸ್‌ಕೋರ್ಸ್ ರಸ್ತೆ ಸೇರಿ ಅಲ್ಲಿಂದ ಬಲಕ್ಕೆ ತಿರುಗಿ ರೇಸ್ ಕೋರ್ಸ್ ರಸ್ತೆ ಎಲ್.ಐ.ಸಿ. ಕಚೇರಿಯ ಮುಂದಿನ ಸೇತುವೆವರೆಗೆ ಸಾಗಿ ಅಲ್ಲಿಂದ ಬಲಕ್ಕೆ ತಿರುಗಿ ರೋಟರಿ ರಸ್ತೆಗಾಗಿ ಕಾಲೇಜು ರಸ್ತೆ ಸೇರಿ ಅಲ್ಲಿಂದ ಬಲಕ್ಕೆ ತಿರುಗಿ ಪ್ರಾರಂಭದ ಮನೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ.6<br>ದಕ್ಷಿಣಕ್ಕೆ : ವಾರ್ಡ್ ನಂ.12<br>ಪೂರ್ವಕ್ಕೆ : ವಾರ್ಡ್ ನಂ.11<br>ಪಶ್ಚಿಮಕ್ಕೆ : ವಾರ್ಡ್ ನಂ.13 | ಹಿಂದುಳಿದ ವರ್ಗ (ಎ) |
| 11 | ಮಡಿಕೇರಿ–11<br>ಬ್ಲಾಕ್ ನಂ–12 (ಭಾಗಶಃ) ಬ್ಲಾಕ್ ನಂ–11 (ಭಾಗಶಃ), ಬ್ಲಾಕ್ ನಂ–13 (ಭಾಗಶಃ)<br>(ಗೌಳಿಬೀದಿ, ಮುಖ್ಯ ರಸ್ತೆ) | ನಗರಸಭಾ ಬ್ಲಾಕ್ ನಂ.12ರ ಮನೆ ನಂ. 1– (1) ರ ಬಳಿ ಯಂ.ಯು. ಮುತ್ತಣ್ಣನವರ ಮನೆಯಿಂದ ಪ್ರಾರಂಭಗೊಂಡು ಪ್ರಧಾನ ಅಂಚೆ ಕಚೇರಿಗಾಗಿ ಪುರಭವನ ವೃತ್ತಕ್ಕೆ ಬಂದು ಅಲ್ಲಿಂದ ಮಹಾತ್ಮಗಾಂಧಿ ರಸ್ತೆಗಾಗಿ ರಸ್ತೆಯ ಬಲಭಾಗದ ಮನೆಗಳು ಸೇರಿಕೊಂಡಂತೆ ರೇಸ್‌ಕೋರ್ಸ್ ರಸ್ತೆಯ ಹಳೇ ಇಂಡೇನ್ ಗ್ಯಾಸ್ ಗೋದಾಮಿನವರೆಗೆ ತೆರಳಿ ಅಲ್ಲಿಂದ ಬಲಕ್ಕೆ ಕಾಲುದಾರಿಗಾಗಿ ಕೆಳಗಿಳಿದು ಹಳೇ ಇಂಡೇನ್‌ಗ್ಯಾಸ್ ಕಚೇರಿ ಬಳಿ ಇರುವ ಮೆಟ್ಟಿಲು ಬಳಿಗಾಗಿ ಮುಂದುವರೆದು ಬಲಕ್ಕೆ ತಿರುಗಿ ಲಸ್ಕರ್ ಮಸೀದಿಗಾಗಿ ಪುರಭವನದ ಹಿಂಭಾಗ ಚೈಲ್ಡ್‌ಕೇರ್ ಕ್ಲಿನಿಕ್‌ನಿಂದ ಎಡಕ್ಕೆ ತಿರುಗಿ ದಂಡಿನ ಮಾರಿಯಮ್ಮ ದೇವಾಲಯಕ್ಕಾಗಿ ಮುಂದುವರಿದು ನಗರಸಭಾ ವಸತಿ ಗೃಹವನ್ನು ಒಳಗೊಂಡು ಪ್ರಾರಂಭದ ಮನೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ.4 ಮತ್ತು 19<br>ದಕ್ಷಿಣಕ್ಕೆ : ವಾರ್ಡ್ ನಂ.12 ಮತ್ತು 14<br>ಪೂರ್ವಕ್ಕೆ : ವಾರ್ಡ್ ನಂ.10 ಮತ್ತು 12<br>ಪಶ್ಚಿಮಕ್ಕೆ : ವಾರ್ಡ್ ನಂ.14 | ಸಾಮಾನ್ಯ (ಮಹಿಳೆ) |
| 12 | ಮಡಿಕೇರಿ–12<br>ಬ್ಲಾಕ್ ನಂ–14 (ಭಾಹಶಃ)<br>(ಇಂದಿರಾ ನಗರ, ಚಾಮುಂಡೇಶ್ವರ ನಗರ ಮತ್ತು ಹೊಸ ಬಡಾವಣೆ) | ರಾಜಾಸೀಟ್ ಬಳಿಯ ಕುಂದುರುಮೊಟ್ಟೆ ದೇವಸ್ಥಾನದಿಂದ ಪ್ರಾರಂಭಗೊಂಡು ಹೋಟೇಲ್ ವ್ಯಾಲಿವ್ಯೂರವರೆಗೆ ಮುಂದುವರೆದು ನಗರಸಭಾ ನೀರು ಶುದ್ದೀಕರಣ ಕೇಂದ್ರವರೆಗೆ ತಲುಪಿ ಎಡಭಾಗದ ಮಂಗಳೂರು ರಸ್ತೆಯ ನಗರಸಭಾ ಸರಹದ್ದು ತಲುಪಿ ಚಾಮುಂಡೇಶ್ವರಿ ನಗರವನ್ನು ಒಳಗೊಂಡು ಇಂದಿರಾ ನಗರವನ್ನು ಒಳಗೊಂಡು ಪ್ರಾರಂಭದ ದೇವಸ್ಥಾನಕ್ಕೆ ಸೇರುವುದು<br>ಉತ್ತರಕ್ಕೆ : ವಾರ್ಡ್ ನಂ.14<br>ದಕ್ಷಿಣಕ್ಕೆ : ನಗರಸಭಾ ಸರಹದ್ದು<br>ಪೂರ್ವಕ್ಕೆ : ನಗರಸಭಾ ಸರಹದ್ದು<br>ಪಶ್ಚಿಮಕ್ಕೆ : ರಾಜಾಸೀಟು | ಹಿಂದುಳಿದ ವರ್ಗ (ಎ) (ಮಹಿಳೆ) |
| 13 | ಮಡಿಕೇರಿ–13<br>ಬ್ಲಾಕ್ ನಂ–14 (ಭಾಗಶಃ)<br>(ಜ್ಯೋತಿ ನಗರ, ಹೊಸಬಡಾವಣೆ, ಪೋಲೀಸ್ ಕ್ವಾಟ್ರಸ್ ಮತ್ತು ರಿಮ್ಯೆಂಡ್‌ಹೋಂ) | ನಗರಸಭಾ ಬ್ಲಾಕ್ ನಂ–14ಎ. ಯ ಶ್ರೀ ಅಂತೋಣಿ ಯವರ ಮನೆಯಿಂದ ಪ್ರಾರಂಭಗೊಂಡು ಹೊಸ ಬಡಾವಣೆಯಲ್ಲಿ ವಿನ್‌ಸೆಂಟ್ ಕಾಂಪೌಂಡು ಗಾಗಿ ಹಾದು ಬಂದು ರೇಸ್ ಕೋರ್ಸ್ ರಸ್ತೆ ಸೇರಿ ಅಲ್ಲಿಂದ ಎಡಕ್ಕೆ ತಿರುಗಿ ಎಲ್.ಐ.ಸಿ. ಕಟ್ಟಡದ ಮುಂದಿನಸೇತುವೆವರೆಗೆ ಹೋಗಿ ಅಲ್ಲಿಂದ ಎಡಕ್ಕೆ ತಿರುಗಿ ಸ್ಟೀವರ್ಟ್ ರಸ್ತೆಗಾಗಿ ನೀರು ಶುದ್ದೀಕರಣ ಕೆಳಭಾಗದ ಜ್ಯೋತಿನಗರಕ್ಕಾಗಿ ಬಂದು ಕ್ರಿಸ್ತನ್ ಸಶ್ಮಾನಕ್ಕಾಗಿ ಕೆಳಗೆ ಇಳಿದು ಶ್ರೀ ನಾಗಲಿಂಗಂ ಮನೆ ರಸ್ತೆಗಾಗಿ ಹಾದು ಪ್ರಾರಂಭದ ಮನೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ. 10<br>ದಕ್ಷಿಣಕ್ಕೆ : ವಾರ್ಡ್ ನಂ.11 ಮತ್ತು ನಗರಸಭಾ ಸರಹದ್ದು<br>ಪೂರ್ವಕ್ಕೆ : ವಾರ್ಡ್ ನಂ.15 ಮತ್ತು 16<br>ಪಶ್ಚಿಮಕ್ಕೆ : ವಾರ್ಡ್ ನಂ.11 | ಸಾಮಾನ್ಯ |

| ಕ್ರ. ಸಂ. | ವಾರ್ಡು ಸಂಖ್ಯೆ ಮತ್ತು ಹೆಸರು | ಚೆಕ್ಕುಬಂದಿ (ವಿಸ್ತೀರ್ಣ) | ಮೀಸಲಾತಿ |
|---|---|---|---|
| 14 | ಮಡಿಕೇರಿ–14<br>ಬ್ಲಾಕ್ ನಂ–15,<br>ಬ್ಲಾಕ್ ನಂ–14 (ಭಾಗಶಃ)<br>(ರಾಜಸೀಟ್ ರಸ್ತೆ, ಮಂಗಳೂರು ರಸ್ತೆ, ಬ್ರಾಹ್ಮಣರ ಬೀದಿ ಮತ್ತು ಚಾಮರಾಜ ವಿಲ್ಲಾ ರಸ್ತೆ) | ರಾಜಾಸೀಟಿನಿಂದ ಪ್ರಾರಂಭವಾಗಿ ಮಹಾತ್ಮಗಾಂದಿ ರಸ್ತೆಗಾಗಿ ಹಾದು ಚಿಕ್ಕಪೇಟೆಯ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿಗಾಗಿ ಬಲಕ್ಕೆ ತಿರುಗಿ ಮಂಗಳೂರು ರಸ್ತೆ ಸೇರಿ ಅಲ್ಲಿಂದ ರಸ್ತೆಯ ಬಲಭಾಗದ ಮನೆಗಳು ಸೇರಿಕೊಂಡಂತೆ ಒಂದನೇ ಮೈಲಿ ಬಳಿ ಸ್ವಾಗತ ಫಲಕದವರೆಗೆ ಹೋಗಿ ಅಲ್ಲಿಂದ ಬಲಕ್ಕೆ ತಿರುಗಿ ರಾಜಾಸೀಟು ಸೇರುವುದು. ಕುಂದುರುಮೊಟ್ಟೆ ದೇವಸ್ಥಾನದಿಂದ ಪ್ರಾರಂಭಗೊಂಡು ರೇಸ್ ಕೋರ್ಸ್ ರಸ್ತೆಗಾಗಿ ಮುಂದುವರೆದು ಶ್ರೀರಾಡ್ರಿಗಸ್‌ರವರ ಕಟ್ಟಡದಿಂದ ಎಡಕ್ಕೆ ತಿರುಗಿ ಗಣಪತಿ ದೇವಾಲಯಕ್ಕಾಗಿ ಮುಂದುವರೆದು ಕಾರ್ಯಪ್ಪನವರ ಮನೆಗಾಗಿ ಶ್ರೀ ನಾಗಲಿಗಂನವರ ಮನೆಗಾಗಿ ಕ್ರಿಸ್ತನ್ ಸಶ್ಮಾನದ ಮೇಲ್ಬಾಗದ ಬಾಣೆಗಾಗಿ ನೀರು ಶುದ್ದೀಕರಣ ಕೇಂದ್ರದ ರಸ್ತೆ ಸೇರಿ ಎಡಕ್ಕೆ ತಿರುಗಿ ಹೋಟೇಲ್ ವ್ಯಾಲಿವ್ಯೂ ರಸ್ತೆಯಲ್ಲಿ ಮುಂದುವರೆದು ಪ್ರಾರಂಭದ ದೇವಸ್ಥಾನಕ್ಕೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ. 19<br>ದಕ್ಷಿಣಕ್ಕೆ : ನಗರಸಭಾ ಸರಹದ್ದು<br>ಪೂರ್ವಕ್ಕೆ : ವಾರ್ಡ್ ನಂ.11<br>ಪಶ್ಚಿಮಕ್ಕೆ : ವಾರ್ಡ್ ನಂ.15 | ಹಿಂದುಳಿದ ವರ್ಗ (ಎ) |
| 15 | ಮಡಿಕೇರಿ–15<br>ಬ್ಲಾಕ್ ನಂ–16<br>(ಮಂಗಳಾದೇವಿ ನಗರ, ಜ॥ ತಿಮ್ಮಯ್ಯ ರಸ್ತೆ, ಮಿಷನ್ ಕಾಂಪೌಂಡ್ ಮತ್ತು ಮೂರ್ನಾಡು ರಸ್ತೆ) | ನಗರಸಭಾ ಬ್ಲಾಕ್ ನಂ–16(1) ರಿಂದ ಮಂಗಳಾ ದೇವಿನಗರದಿಂದ ಪ್ರಾರಂಭಗೊಂಡು ಮಂಗಳಾದೇವಿ ನಗರ ಪೂರ್ತಿ ಸೇರಿಕೊಂಡಂತೆ ಜಿ.ಟಿ. ರಸ್ತೆಗಾಗಿ ಬಾಸೆಲ್ ಮಿಷನ್ ಕಾಂಪೌಂಡ್‌ಗಾಗಿ ಆಸ್ಪತ್ರೆ ಆವರಣಕ್ಕಾಗಿ ಹಾದು ಮೂರ್ನಾಡು ರಸ್ತೆ ಸೇರಿ ಅಲ್ಲಿಂದ ಮಡಿಕೇರಿ ವಿರಾಜಪೇಟೆ ರಸ್ತೆ ನಗರಸಭಾ ಸರಹದ್ದು ಗ್ರೌಂಡಿನವರೆಗೆ ರಸ್ತೆಯ ಎರಡು ಬದಿಗಳಲ್ಲಿನ ಎಲ್ಲಾ ಮನೆಗಳು ಸೇರಿಕೊಂಡಂತೆ ಮಂಗಳಾ ದೇವಿ ನಗರ ತಲುಪಿ ಪ್ರಾರಂಭದ ಮನೆ ಸೇರುವುದು (ಮನೆ ನಂ. 16–1ರಿಂದ 16–160ರವರೆಗಿನ ಎಲ್ಲಾ ಮನೆಗಳು ಸೇರಿಕೊಂಡಂತೆ)<br>ಉತ್ತರಕ್ಕೆ : ವಾರ್ಡ್ ನಂ. 14 ಮತು 16<br>ದಕ್ಷಿಣಕ್ಕೆ : ನಗರಸಭಾ ಸರಹದ್ದು<br>ಪೂರ್ವಕ್ಕೆ : ವಾರ್ಡ್ ನಂ.17<br>ಪಶ್ಚಿಮಕ್ಕೆ : ವಾರ್ಡ್ ನಂ. 14 | ಪರಿಶಿಷ್ಟ ಜಾತಿ |
| 16 | ಮಡಿಕೇರಿ–16<br>ಬ್ಲಾಕ್ ನಂ–16 (ಭಾಗಶಃ),<br>ಬ್ಲಾಕ್ ನಂ–17 ಮತ್ತು ಬ್ಲಾಕ್ ನಂ–18<br>(ಮೂರ್ನಾಡು ರಸ್ತೆ ಬಲಭಾಗ, ಮಂಗಳೂರು ರಸ್ತೆ ಎಡಭಾಗ, ಮೈಸೂರು ರಸ್ತೆ ಮತ್ತು ಜಿ.ಟಿ. ರಸ್ತೆ) | ನಗರಸಭಾ ಬ್ಲಾಕ್ ನಂ16 ರ ಮನೆ ನಂ : 161 ರಿಂದ ಪ್ರಾರಂಭಗೊಂಡು (ಮೂರ್ನಾಡು ರಸ್ತೆಯ ನಾಳಿಯಂಡ ನಾಣಯ್ಯನವರ ಮನೆಯಿಂದ ಚಿಕ್ಕಪೇಟೆಗಾಗಿ ಹಳೇ ಅಕ್ಟ್ರಾಯ ಕಟ್ಟೆವರೆಗೆ ಬಂದು ಅಲ್ಲಿಂದ ಮಂಗಳೂರು ರಸ್ತೆಗಾಗಿ ಮಂಗಳೂರು ರಸ್ತೆಯ ಎಡಭಾಗದ ಮನೆಗಳು ಸೇರಿಕೊಂಡು ಒಂದನೇ ಮೈಲ್‌ವರೆಗೆತಲುಪುವುದು ನಂತರ ಜಿ.ಟಿ. ರಸ್ತೆಯಲ್ಲಿ ಮುಂದುವರೆದು ಶಾಂತಿನಿಕೇತನವನ್ನು ಒಳಗೊಂಡು ಜಯನಗರವನ್ನು ಆವರಿಸಿಕೊಂಡು ಜಯನಗರ ತೋಡಿಗಾಗಿ ಮುಂದುವರೆದು ಚಾಮರಾಜ ರಸ್ತೆಯಲ್ಲಿರುವ ಅಬಕ್ಕಾರಿ ಇಲಾಖೆಯ ಕಟ್ಟಡವನ್ನು ಒಳಗೊಂಡು ಬ್ರಾಹ್ಮಣಬೀದಿ ರಸ್ತೆಗಾಗಿ ಆಂಜನೇಯ ದೇವಸ್ಥಾನಕ್ಕಾಗಿ ಮುಂದುವರೆದು ಚಿಕ್ಕಪೇಟೆ ರಸ್ತೆಗಾಗಿ ಶ್ರೀ ರಮೇಶ್ ಹೊಳ್ಳ ಕಟ್ಟಡವನ್ನು ಆವರಿಸಿಕೊಂಡು ಜಿ.ಟಿ. ರಸ್ತೆ ತಲುಪುವುದು.<br>ಉತ್ತರಕ್ಕೆ : ವಾರ್ಡ್ ನಂ. 18<br>ದಕ್ಷಿಣಕ್ಕೆ : ನಗರಸಭಾ ಸರಹದ್ದು<br>ಪೂರ್ವಕ್ಕೆ : ವಾರ್ಡ್ ನಂ.14<br>ಪಶ್ಚಿಮಕ್ಕೆ : ವಾರ್ಡ್ ನಂ.15 | ಸಾಮಾನ್ಯ (ಮಹಿಳೆ) |
| 17 | ಮಡಿಕೇರಿ–17<br>ಬ್ಲಾಕ್ ನಂ–18 (ಭಾಗಶಃ), ಬ್ಲಾಕ್ ನಂ–17 (ಭಾಗಶಃ) ಮತ್ತು ಬ್ಲಾಕ್ ನಂ–19<br>(ಮೈಸೂರು ರಸ್ತೆ ಭಾಗಶಃ, ಶಿಕಾರಿ ಉಕ್ಕುಡ, ಹಳೇ ಸಿದ್ದಾಪುರ ರಸ್ತೆ ಮತ್ತು ಪಿ.ಡಬ್ಲ್ಯೂಡಿ ಕ್ವಾಟ್ರಸ್) | ನಗರಸಭಾ ಬ್ಲಾಕ್ ನಂ. 18 ರ ಬ್ಲಾಸಂ ಶಾಲೆಯಿಂದ ಪ್ರಾರಂಭಗೊಂಡು ಮೈಸೂರು ರಸ್ತೆಗಾಗಿ ಜೈನ್ ಗೇಟ್ ಬಳಿಯ ನಗರಸಭಾ ವಸತಿ ಗೃಹಗಳವರೆಗೆ ಹೋಗಿ ಅಲ್ಲಿಂದ ತಿರುಗಿ ಸುದರ್ಶನ ಅತಿಥಿಗೃಹ ಕೆಳಭಾಗದ ರಸ್ತೆಗಾಗಿ ಬಂದು ಸುದರ್ಶನ ಕೆಳಗಿನ ಬಡಾವಣೆ ಜಲಾಶ್ರಯ ಬಡಾವಣೆಗಾಗಿ ಮೇಲೆ ಅಶ್ವಿನಿ ರಸ್ತೆಗೆ ಬಂದು ಅಲ್ಲಿಂದ ಕೆ.ಎಸ್. ಆರ್.ಟಿ.ಸಿ. ವಸತಿಗೃಹಗಳ ಮುಂದೆ ಹಾದು ಶಾಂತಿ ನಿಕೇತನಕ್ಕೆ ಬಂದು ಕೆಳಗಿನ ಹಳೇ ಸಿದ್ದಾಪುರ ರಸ್ತೆಗಾಗಿ ಅಶೋಕ ಪುರಕ್ಕೆ ತೆರಳಿ ಅಲ್ಲಿಂದ ಅಶೋಕಪುರ ಜಿಲ್ಲಾಧಿಕಾರಿಯವರ ಬಂಗ್ಲೆ ವಠಾರ ಕ.ವಿ.ಮಂಡಳಿ ಕಾಲೋನಿ ಸೇರಿಕೊಂಡಂತೆ ಮೈಸೂರು ರಸ್ತೆಯ ಸೌದೆ ಡಿಪೋ ಎದುರಿನ ಶ್ರೀಮತಿ ಕೆ.ಜಿ. ದೇವಕ್ಕಿಯವರ ಮನೆ ಸೇರುವುದು. | ಹಿಂದುಳಿದ ವರ್ಗ (ಎ) (ಮಹಿಳೆ) |

| ಕ್ರ. ಸಂ. | ವಾರ್ಡು ಸಂಖ್ಯೆ ಮತ್ತು ಹೆಸರು | ಚೆಕ್ಕುಬಂದಿ (ವಿಸ್ತೀರ್ಣ) | ಮೀಸಲಾತಿ |
|---|---|---|---|
| | | ಉತ್ತರಕ್ಕೆ : ನಗರಸಭಾ ಸರಹದ್ದು<br>ದಕ್ಷಿಣಕ್ಕೆ : ನಗರಸಭಾ ಸರಹದ್ದು<br>ಪೂರ್ವಕ್ಕೆ : ನಗರಸಭಾ ಸರಹದ್ದು<br>ಪಶ್ಚಿಮಕ್ಕೆ : ವಾರ್ಡ್ ನಂ.15 ಮತ್ತು 18 | |
| 18 | ಮಡಿಕೇರಿ–18<br>ಬ್ಲಾಕ್ ನಂ–18 (ಭಾಗಶಃ), ಬ್ಲಾಕ್ ನಂ–17 (ಭಾಗಶಃ), ಮೈಸೂರು ರಸ್ತೆ, ಸುದರ್ಶನ್ ವೃತ್ತ, ಪುಟಾಣಿನಗರ ಮತ್ತು ಜಯನಗರ) | ಪುಟಾಣಿ ನಗರದಲ್ಲಿ ಶ್ರೀ ಸೋನ್ಸ್‌ರವರ ಮನೆಯಿಂದ ಪ್ರಾರಂಭಗೊಂಡು ಮುಂದುವರೆ ಯುತ್ತ ಶ್ರೀ ರಮೇಶ್ ರವರ ಮನೆಯಿಂದ ಬಲಕ್ಕೆ ತಿರುಗಿ ಪುಟಾಣಿ ನಗರದಲ್ಲಿ ಡಾ॥ ರಾಜರೈ ರವರ ಮನೆಗಾಗಿ ಮುಂದುವರೆದು ಪೂರ್ತಿ ಪುಟಾಣಿ ನಗರ ಆವರಿಸಿಕೊಂಡು (ಜಯನಗರವನ್ನು ಹೊರತು ಪಡಿಸಿ) ಕೆಳಭಾಗದಲ್ಲಿರುವ ತೋಡಿಗಾಗಿ ಮುಂದುವರೆದು ಅಬಕಾರಿ ಇಲಾಖೆಯ ಕಛೇರಿ ಬಳಿಯಿಂದ ಶ್ರೀ ವರ್ಗಿಸ್ ಮನೆಯನ್ನು ಒಳಗೊಂಡು ಪ್ರಾರಂಭದ ಮನೆ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ. 19<br>ದಕ್ಷಿಣಕ್ಕೆ : ವಾರ್ಡ್ ನಂ. 16<br>ಪೂರ್ವಕ್ಕೆ : ವಾರ್ಡ್ ನಂ. 19<br>ಪಶ್ಚಿಮಕ್ಕೆ : ವಾರ್ಡ್ ನಂ. 17 | ಸಾಮಾನ್ಯ |
| 19 | ಮಡಿಕೇರಿ–19<br>ಬ್ಲಾಕ್ ನಂ–22, ಬ್ಲಾಕ್ ನಂ–20, ಬ್ಲಾಕ್ ನಂ–23, ಬ್ಲಾಕ್ ನಂ–21<br>(ಬಾಣೆಮೊಟ್ಟೆ, ಚೈನ್‌ಗೇಟ್ ರಸ್ತೆ ಮತ್ತು ಜೂನಿಯರ್ ಕಾಲೇಜು ರಸ್ತೆ) | ಬ್ಲಾಕ್ ನಂ 22 ಅಂಚೆ ಕಛೇರಿಯ ಎದುರುಭಾಗದಿಂದ ಪ್ರಾರಂಭಗೊಂಡು ಖಾಸಗಿ ಬಸ್ ನಿಲ್ದಾಣಕ್ಕಾಗಿ ಮುಂದುವರೆದು ಜೂನಿಯರ್ ಕಾಲೇಜು ರಸ್ತೆಗಾಗಿ ತಿರುಗಿ ಬಲಭಾಗದ ಮನೆಗಳನ್ನು ಆವರಿಸಿಕೊಂಡು ಹೌಸಿಂಗ್ ಬೋರ್ಡ್‌ನ ರಸ್ತೆಗಾಗಿ ಮುಂದುವರೆದು ಬಲಭಾಗದ ಮನೆಗಳನ್ನು ಆವರಿಸಿಕೊಂಡು ಚೈನ್ ಗೇಟ್ ಬಳಿಯಿಂದ ಬಲಕ್ಕೆ ತಿರುಗಿ ದೇಚೂರು ರಸ್ತೆಗಾಗಿ ಪುಟಾಣಿ ನಗರದ ಸರಹದ್ದಿನಿಂದ ಮುಂದುವರೆದು ಚಾಮರಾಜ ಬಂಗ್ಲೆಯನ್ನು ಒಳಗೊಂಡು ಶ್ರೀ ಓಂಕಾರೇಶ್ವರ ದೇವಾಲಯದ ರಸ್ತೆಗಾಗಿ ಮುಂದುವರೆದು ಎಡಕ್ಕೆ ತಿರುಗಿ ಆಂಜನೇಯ ದೇವಸ್ಥಾನಕ್ಕಾಗಿ ಚಿಕ್ಕಪೇಟೆ ರಸ್ತೆಗೆ ಮುಂದುವರೆದು ಪುರಭವನದ ಎದುರುಭಾಗದ ಜಯಕುಮಾರ್ ಕಟ್ಟಡವನ್ನು ಆವರಿಸಿಕೊಂಡು ಬಲಕ್ಕೆ ತಿರುಗಿ ಮುಖ್ಯರಸ್ತೆಯಲ್ಲಿ ಮುಂದುವರೆದು ಪ್ರಾರಂಭದ ಸ್ಥಳ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ. 20<br>ದಕ್ಷಿಣಕ್ಕೆ : ವಾರ್ಡ್ ನಂ. 16<br>ಪೂರ್ವಕ್ಕೆ : ವಾರ್ಡ್ ನಂ. 6 ಮತ್ತು 11<br>ಪಶ್ಚಿಮಕ್ಕೆ : ವಾರ್ಡ್ ನಂ. 18 | ಹಿಂದುಳಿದ ವರ್ಗ (ಎ) |
| 20 | ಮಡಿಕೇರಿ–20<br>ಬ್ಲಾಕ್ ನಂ–23 (ಭಾಗಶಃ)<br>(ದಾಸವಾಳ ರಸ್ತೆ, ಕನ್ನಂಡಬಾಣೆ ಮತ್ತು ಸೋಮವಾರಪೇಟೆ ರಸ್ತೆ) | ಬ್ಲಾಕ್ ನಂ. 23 ರ ಮನೆ ನಂ 1 ರ ದಾಸವಾಳದ ಶ್ರೀ ಬಸಪ್ಪ ಚಿತ್ರ ಮಂದಿರದಿಂದ ಪ್ರಾರಂಭಗೊಂಡು ಕನ್ನಂಡಬಾಣೆ ವಠಾರ, ಪಂಪ್ ಹೌಸ್ ರಸ್ತೆ ವಠಾರ, ಸೋಮವಾರಪೇಟೆ ರಸ್ತೆ ವಠಾರವೆಲ್ಲ ಸೇರಿ ಕೊಂಡಂತೆ ಮನೆ ನಂ 23 : 176ಕ್ಕೆ ಶ್ರೀ ಕೆ.ಎಸ್. ತೇಜರವರ ಮನೆ ಕೊನೆಗೊಳ್ಳುವುದು.<br>ಉತ್ತರಕ್ಕೆ : ವಾರ್ಡ್ ನಂ. 23<br>ದಕ್ಷಿಣಕ್ಕೆ : ವಾರ್ಡ್ ನಂ. 19<br>ಪೂರ್ವಕ್ಕೆ : ವಾರ್ಡ್ ನಂ. 21<br>ಪಶ್ಚಿಮಕ್ಕೆ : ವಾರ್ಡ್ ನಂ. 3 ಮತ್ತು 4 | ಸಾಮಾನ್ಯ (ಮಹಿಳೆ) |
| 21 | ಮಡಿಕೇರಿ–21<br>ಬ್ಲಾಕ್ ನಂ–23 (ಭಾಗಶಃ)<br>(ಪಾರೆಸ್ಟ್ ಕ್ವಾಟ್ರಸ್, ಸೋಮವಾರಪೇಟೆ ರಸ್ತೆ, ಕನ್ನಂಡಬಣೆ ಪಂಪ್‌ಹೌಸ್ ಮತ್ತು ಹೌಸಿಂಗ್ ಬೋರ್ಡ್) | ಬ್ಲಾಕ್ ನಂ 23 ರ ಫಾರೆಸ್ಟ್ ವಸತಿಗೃಹದ ಶ್ರೀ. ವಿ.ಎಂ. ಸುರೇಶ್ ರವರ ಮನೆಯಿಂದ ಪ್ರಾರಂಭಗೊಂಡು ಕನ್ನಂಡಬಾಣೆ ಪಂಪ್ ಹೌಸಿನ ಮೇಲಿನ ವಠಾರ ಅರಣ್ಯ ಇಲಾಖೆಯ ಅತಿಥಿಗೃಹ, ಹೌಸಿಂಗ್ ಬೋರ್ಡ್‌ನ ಕಾಲೋನಿಗಾಗಿ ಮೈಸೂರು ರಸ್ತೆಗೆ ಸೇರಿ ಅಲ್ಲಿಂದ ಮುಂದುವರೆದು ಚೈನ್ ಗೇಟ್ ಮುಖಾಂತರ ಹಾದು ಮ್ಯಾನ್ಸ್ ಕೌಂಪೌಂಡ್ ರಸ್ತೆಗೆ ಬಂದು ಗೌಡ ಸಮಾಜದಿಂದ ಬಲಕ್ಕೆ ತಿರುಗಿ ಮೇಲಕ್ಕೆ ಸಾಗಿ ಡಿ. ಎಫ್. ಓ ವಸತಿಗೃಹದ ಬಳಿ ಸೇರುವುದು.<br>ಉತ್ತರಕ್ಕೆ : ವಾರ್ಡ್ ನಂ. 23<br>ದಕ್ಷಿಣಕ್ಕೆ : ವಾರ್ಡ್ ನಂ. 18<br>ಪೂರ್ವಕ್ಕೆ : ನಗರಸಭಾ ಸರಹದ್ದು<br>ಪಶ್ಚಿಮಕ್ಕೆ : ವಾರ್ಡ್ ನಂ. 20 | ಸಾಮಾನ್ಯ |

| ಕ್ರ. ಸಂ. | ವಾರ್ಡು ಸಂಖ್ಯೆ ಮತ್ತು ಹೆಸರು | ಚೆಕ್ಕುಬಂದಿ (ವಿಸ್ತೀರ್ಣ) | ಮೀಸಲಾತಿ |
|---|---|---|---|
| 22 | ಮಡಿಕೇರಿ–22<br>ಬ್ಲಾಕ್ ನಂ–24 (ಭಾಗಶಃ)<br>(ಮುತ್ತಪ್ಪ ದೇವಸ್ಥಾನ ರಸ್ತೆ, ಗದ್ದಿಗೆ ಹಿಂಭಾಗ ಮತ್ತು ತ್ಯಾಗರಾಜ ಕಾಲೋನಿ) | ಮಹದೇವಪೇಟೆ ನಗರಸಭಾ ಹಿರಿಯ ಪ್ರಾಥಮಿಕ ಶಾಲೆಯಿಂದ ಪ್ರಾರಂಭಗೊಂಡು ಎ.ವಿ. ಶಾಲೆ ಮುತ್ತಪ್ಪ ದೇವಾಲಯ ರಸ್ತೆಗಾಗಿ ಚಪ್ಪೆಕಾಡು ರಸ್ತೆಯ ಶ್ರೀ ಫಯಾಸ್ ರವರ ಮನೆಯವರೆಗೆ ಸಾಗಿ ಅಲ್ಲಿಂದ ಬಲಕ್ಕೆ ತಿರುಗಿ ನಗರಸಭಾ ಸರಹದ್ದು ಬೌಂಡ್ರಿಗಾಗಿ ತ್ಯಾಗರಾಜ ಕಾಲೋನಿ ವಠಾರ ಗದ್ದಿಗೆ ಬಲಭಾಗ ಆಶ್ರಯ ಮನೆಗಳು ಸೇರಿಕೊಂಡಂತೆ ಕುಂಬಳಕೇರಿ ಉಕ್ಕಡ ರಸ್ತೆಗಾಗಿ ಬಲಕ್ಕೆ ತಿರುಗಿ ಮಹದೇವಪೇಟೆ ರಸ್ತೆಗಾಗಿ ಹಾದು ಬಂದು ಎ.ವಿ. ಶಾಲೆ ಸೇರುವುದು<br>ಉತ್ತರಕ್ಕೆ : ನಗರಸಭಾ ಸರಹದ್ದು<br>ದಕ್ಷಿಣಕ್ಕೆ : ವಾರ್ಡ್ ನಂ. 23<br>ಪೂರ್ವಕ್ಕೆ : ನಗರಸಭಾ ಸರಹದ್ದು<br>ಪಶ್ಚಿಮಕ್ಕೆ : ವಾರ್ಡ್ ನಂ. 22 | ಸಾಮಾನ್ಯ |
| 23 | ಮಡಿಕೇರಿ–23<br>ಬ್ಲಾಕ್ ನಂ–24 (ಭಾಗಶಃ)<br>(ಗದ್ದಿಗೆ ಹಿಂಭಾಗ, ಆಜಾದ್ ನಗರ, ಉಕ್ಕುಡ ರಸ್ತೆ ಮತ್ತು ರಾಜರಾಜೇಶ್ವರಿ ನಗರ) | ಗದ್ದಿಗೆಯ ಮನೆ ನಂ 24: 121ರ ಶ್ರೀ ಹಸನಬ್ಬನವರ ಮನೆಯಿಂದ ಪ್ರಾರಂಭಗೊಂಡು ಅಜಾದ್ ನಗರ ಕುಂಬಳಗೇರಿ ಉಕ್ಕಡ ಸೇರಿಕೊಂಡಂತೆ ನಗರಸಭಾ ಹಳೇ ಸರಹದ್ದು ಬೌಂಡ್ರಿಗಾಗಿ ಸಂಪಿಗೆ ಕಟ್ಟೆ ಸೇರಿ ಅಲ್ಲಿಂದ ಸಂಪಿಗೆ ಕಟ್ಟೆ ಮಡಿಕೇರಿ ಮಾರ್ಗವಾಗಿ ಹಳೇ ಆರ್ಮಿಕ್ಯಾಂಟೀನ್‌ನವರೆಗಿನ ರಸ್ತೆಯ ಬಲಭಾಗದ ಎಲ್ಲಾ ಮನೆಗಳು ಸೇರಿಕೊಂಡು ಅಲ್ಲಿಂದ ಬಲಕ್ಕೆ ಉಕ್ಕಡ ರಸ್ತೆಗೆ ಸಾಗಿ ಪ್ರಾರಂಭದ ಮನೆ ಸೇರುವುದು.<br>ಉತ್ತರಕ್ಕೆ : ನಗರಸಭಾ ಸರಹದ್ದು<br>ದಕ್ಷಿಣಕ್ಕೆ : ವಾರ್ಡ್ ನಂ. 23<br>ಪೂರ್ವಕ್ಕೆ : ನಗರಸಭಾ ಸರಹದ್ದು<br>ಪಶ್ಚಿಮಕ್ಕೆ : ವಾರ್ಡ್ ನಂ. 22 | ಸಾಮಾನ್ಯ |

**ಕೆ.ವಿ. ರಾಮಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ – I | ಬೆಂಗಳೂರು, ಬುಧವಾರ, ಜೂನ್ ೫, ೨೦೧೩ (ಜ್ಯೇಷ್ಠ ೧೫, ಶಕ ವರ್ಷ ೧೯೩೫) | ನಂ. ೮೧೯ |
|---|---|---|
| **Part – I** | **Bangalore, Wednesday, June 5, 2013 (Jyeishta 15, Shaka Varsha 1935)** | **No. 819** |



## ಸಾರಿಗೆ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಸಾರಿಇ 69 ಸಾಇಪ 2013, ಬೆಂಗಳೂರು, ದಿನಾಂಕ: 05-06-2013**

ಗಣ್ಯ / ಅತಿ ಗಣ್ಯ, ಸರ್ಕಾರಿ ಅಧಿಕಾರಿಗಳ ಅಧಿಕೃತ ವಾಹನಗಳ ಮೇಲೆ ಕೆಂಪು ದೀಪ ಉಪಯೋಗಿಸುವ ಸಂಬಂಧ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಎಸ್‌ಎಲ್‌ಪಿ (ಸಿವಿಲ್) ಸಂಖ್ಯೆ: 25237/2010ರ ಪ್ರಕರಣದಲ್ಲಿ ನೀಡಿರುವ ಆದೇಶದ ಹಿನ್ನೆಲೆಯಲ್ಲಿ ಇದುವರೆವಿಗೂ ಈ ಸಂಬಂಧ ಹೊರಡಿಸಲಾದ ಅಧಿಸೂಚನೆಗಳನ್ನು ಹಿಂದಕ್ಕೆ ಪಡೆದು, ಈ ಕೆಳಕಂಡ ಪ್ರತಿಷ್ಠಿತ ವ್ಯಕ್ತಿಗಳ ಅಧಿಕೃತ ವಾಹನಗಳ ಮೇಲೆ ಮಾತ್ರ ವಿಐಪಿ ರೆಡ್ ಟಾಪ್ ಲೈಟ್ ಬಳಸಲು ಕರ್ನಾಟಕ ಸರ್ಕಾರವು ಈ ಮೂಲಕ ನಿರ್ದಿಷ್ಟ ಪಡಿಸಿ ಅಧಿಸೂಚನೆ ಹೊರಡಿಸಿದೆ (ಪ್ರತಿ ಲಗತ್ತಿಸಿದೆ).

1. ಗೌರವಾನ್ವಿತ ರಾಜ್ಯಪಾಲರು.
2. ಮಾನ್ಯ ಮುಖ್ಯಮಂತ್ರಿ ಹಾಗೂ ಮಂತ್ರಿಮಂಡಲದ ಸಚಿವರುಗಳು.
3. ಮಾನ್ಯ ಸಭಾಪತಿ, ಕರ್ನಾಟಕ ವಿಧಾನ ಪರಿಷತ್ತು.
4. ಮಾನ್ಯ ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ.
5. ಗೌರವಾನ್ವಿತ ಮುಖ್ಯ ನ್ಯಾಯಾಧೀಶರು ಹಾಗೂ ಹಾಲಿ ನ್ಯಾಯಾಧೀಶರುಗಳು, ಕರ್ನಾಟಕ ಉಚ್ಚ ನ್ಯಾಯಾಲಯ.

ಮೇಲ್ಕಂಡ ಪ್ರತಿಷ್ಠಿತ ಗಣ್ಯರನ್ನು ಹೊರತುಪಡಿಸಿ, ಸಚಿವರುಗಳ ಸಮಾನ ಸ್ಥಾನಮಾನ ಹೊಂದಿರುವ ನಿಗಮ / ಮಂಡಳಿ / ಪ್ರಾಧಿಕಾರಗಳ ಅಧ್ಯಕ್ಷರು / ಮುಖ್ಯಸ್ಥರು ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ಸಮಾನ ಸ್ಥಾನಮಾನ ಹೊಂದಿರುವ ನ್ಯಾಯಮಂಡಳಿ / ಆಯೋಗಗಳ ಅಧ್ಯಕ್ಷರುಗಳು / ಸದಸ್ಯರುಗಳು ತಮ್ಮ ಅಧಿಕೃತ ವಾಹನಗಳ ಮೇಲೆ ಕೆಂಪು ದೀಪ ಅಳವಡಿಸಿಕೊಳ್ಳುವಂತಿಲ್ಲ. ಇದೇ ರೀತಿ ಕಂದಾಯ ಹಾಗೂ ಪೊಲೀಸ್ ಇಲಾಖೆಯ ಅಧಿಕಾರಿಗಳೂ ಸೇರಿದಂತೆ ಯಾವುದೇ ಸರ್ಕಾರಿ ಅಧಿಕಾರಿಗಳು ಮತ್ತು ಇತರೆ ಗಣ್ಯರು ತಮ್ಮ ಅಧಿಕೃತ ವಾಹನಗಳ ಮೇಲೆ ಕೆಂಪು ದೀಪ ಅಳವಡಿಸಿಕೊಳ್ಳುವಂತಿಲ್ಲ.

ಪ್ರತಿಷ್ಠಿತ ವ್ಯಕ್ತಿಗಳ ಭದ್ರತೆಗೆ ಉಪಯೋಗಿಸುವ ಪೊಲೀಸ್ Escort ವಾಹನಗಳು ಕೇಂದ್ರ ಮೋಟಾರು ವಾಹನ ನಿಯಮಗಳು 1989ರ ನಿಯಮ 108 (3) ರನ್ವಯ ನೀಲಿ ಬಣ್ಣದ ದೀಪ (Blue Top Light) ಅಳವಡಿಸಿಕೊಳ್ಳತಕ್ಕದ್ದು.

**ಕೆ. ಬೀರೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಾರಿಗೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A<br>Part – IV-A | ಬೆಂಗಳೂರು, ಬುಧವಾರ, ಜೂನ್ ೫, ೨೦೧೩ (ಜ್ಯೇಷ್ಠ ೧೫, ಶಕ ವರ್ಷ ೧೯೩೫)<br>Bangalore, Wednesday, June 5, 2013 (Jyeishta 15, Shaka Varsha 1935) | ನಂ. ೮೨೦<br>No. 820 |
|---|---|---|

## ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಾರಿಇ 69 ಸಾಇಪ 2013, ಬೆಂಗಳೂರು, ದಿನಾಂಕ: 05–06–2013**

ಮಾನ್ಯ ಸರ್ವೋಚ್ಚ ನ್ಯಾಯಾಲಯವು ಎಸ್‌ಎಲ್‌ಪಿ (ಸಿವಿಲ್) ಸಂಖ್ಯೆ: 25237/2010ರ ಪ್ರಕರಣದಲ್ಲಿ ದಿನಾಂಕ:04.04.2013 ರಂದು ನೀಡಿರುವ ನಿರ್ದೇಶನದನ್ವಯ ಕರ್ನಾಟಕ ಸರ್ಕಾರವು ಕೇಂದ್ರ ಮೋಟಾರು ವಾಹನ ನಿಯಮಗಳು, 1989ರ ನಿಯಮ 108ರ ಪರಂತುಕ (iii) ನೇ ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಗಣ್ಯ / ಅತಿ ಗಣ್ಯ, ಸರ್ಕಾರಿ ಅಧಿಕಾರಿಗಳ ಅಧಿಕೃತ ವಾಹನಗಳ ಮೇಲೆ ಕೆಂಪು ದೀಪ ಉಪಯೋಗಿಸಲು ಇದುವರೆವಿಗೂ ಹೊರಡಿಸಲಾದ ಅಧಿಸೂಚನೆಗಳನ್ನು ಹಿಂದಕ್ಕೆ ಪಡೆದು ಈ ಮುಂದಿನ ಪ್ರತಿಷ್ಠಿತ ವ್ಯಕ್ತಿಗಳು, ವಿಐಪಿ ರೆಡ್ ಟಾಪ್ ಲೈಟ್ ಬಳಸಲು ಈ ಮೂಲಕ ನಿರ್ದಿಷ್ಟಪಡಿಸಿದೆ:

1. ಗೌರವಾನ್ವಿತ ರಾಜ್ಯಪಾಲರು.
2. ಮಾನ್ಯ ಮುಖ್ಯಮಂತ್ರಿ ಹಾಗೂ ಮಂತ್ರಿಮಂಡಲದ ಸಚಿವರುಗಳು.
3. ಮಾನ್ಯ ಸಭಾಪತಿ, ಕರ್ನಾಟಕ ವಿಧಾನ ಪರಿಷತ್ತು.
4. ಮಾನ್ಯ ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ.
5. ಗೌರವಾನ್ವಿತ ಮುಖ್ಯ ನ್ಯಾಯಾಧೀಶರು ಹಾಗೂ ಹಾಲಿ ನ್ಯಾಯಾಧೀಶರುಗಳು, ಕರ್ನಾಟಕ ಉಚ್ಚ ನ್ಯಾಯಾಲಯ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಬೀರೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಾರಿಗೆ ಇಲಾಖೆ

## TRANSPORT SECRETARIAT

### NOTIFICATION

**No: SARIE 69 SAEPA 2013, Bangalore, dated:05-06-2013**

As per the orders of Hon'ble Supreme Court in SLP (Civil) No:25237/2010 on 04.04.2013, the Government of Karnataka in exercise of the powers conferred by clause (iii) of the proviso to rule 108 of the Central Motor Vehicle Rules 1989 and in supersession of the Notifications issued earlier in this regard, hereby specify for the purpose of the said clause, the following high dignitaries to use V.I.P. Red Top Light on their official vehicles, namely:-

1. His Excellency the Governor of Karnataka.
2. Hon'ble Chief Minister and Ministers of Council of Ministers of Karnataka.
3. Hon'ble Chairman of Karnataka Legislative Council.
4. Hon'ble Speaker, Karnataka Legislative Assembly.
5. Hon'ble Chief Justice and sitting Hon'ble Judges of High Court of Karnataka.

By order and in the name of the Governor of Karnataka.

**K. BEERESH**
Under Secretary to Government
Transport Department

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಜೂನ್ ೬, ೨೦೧೩ (ಜ್ಯೇಷ್ಠ ೧೬, ಶಕ ವರ್ಷ ೧೯೩೫) | ನಂ. ೮೨೧ |
|---|---|---|
| Part – IV-A | Bangalore, Thursday, June 6, 2013 (Jyeishta 16, Shaka Varsha 1935) | No. 821 |

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/01/LABill/2013, Bangalore, Dated: 6-6-2013**

The following Bill was introduced in Legislative Assembly on 6-6-2013

## ಕರ್ನಾಟಕ ವಿಧಾನ ಸಭೆ

## ಹದಿನಾಲ್ಕನೇ ವಿಧಾನ ಸಭೆ

## ಮೊದಲನೇ ಅಧಿವೇಶನ

## ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ವಿಧೇಯಕ, 2013

**(2013ನೇ ಸಾಲಿನ ವಿಧಾನ ಸಭೆಯ ವಿಧೇಯಕ ಸಂಖ್ಯೆ 01)**

ರಾಜ್ಯ ಸರ್ಕಾರ ಮತ್ತು ವೃತ್ತಿ ಶಿಕ್ಷಣ ಕೋರ್ಸುಗಳ ಶಿಕ್ಷಣ ನೀಡುತ್ತಿರುವ ಅನುದಾನಿತವಲ್ಲದ ಖಾಸಗಿ ಶಿಕ್ಷಣ ಸಂಸ್ಥೆಗಳ ನಡುವೆ ಮಾಡಿಕೊಳ್ಳಲು ಪ್ರಸ್ತಾವಿಸಲಾದ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಮಾನ್ಯತೆ ನೀಡುವುದಕ್ಕಾಗಿ ಮತ್ತು 2005 (6) ಎಸ್‌ಸಿಸಿ 537 ರಲ್ಲಿ ವರದಿಯಾದ ಪಿ.ಎ. ಇನಾಂದಾರ್ ಮತ್ತು ಇತರರು – ವಿರುದ್ಧ – ಮಹಾರಾಷ್ಟ್ರ ರಾಜ್ಯ – ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಉಪಬಂಧಿಸಲಾದಂಥ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಇತರ ಉದ್ದೇಶಗಳಿಗಾಗಿ, ಕರ್ನಾಟಕ ನಿವಾಸಿ ವಿದ್ಯಾರ್ಥಿಗಳ ಮತ್ತು ಶೈಕ್ಷಣಿಕವಾಗಿ ಹಾಗೂ ಸಾಮಾಜಿಕವಾಗಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಹಿತರಕ್ಷಣೆಗಾಗಿ 2006–07, 2007–08, 2008–09, 2009–10, 2010–11 2011–12 ಮತ್ತು 2012–13ನೇ ವರ್ಷಗಳಲ್ಲಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳೊಡನೆ ರಾಜ್ಯ ಸರ್ಕಾರವು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದವನ್ನು ಮಾಡಿಕೊಂಡಿರುವುದರಿಂದ ಮತ್ತು 2013–14ನೇ ವರ್ಷದಲ್ಲಿ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಳ್ಳಲು ಉದ್ದೇಶಿಸಿರುವುದರಿಂದ ಹಾಗೂ 2013–14ನೇ ಶೈಕ್ಷಣಿಕ ವರ್ಷದಲ್ಲಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಮತ್ತು ಶುಲ್ಕ ನಿಗದಿಗಾಗಿ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ನ್ನು (2006ರ ಕರ್ನಾಟಕ ಅಧಿನಿಯಮ 8) ತಡೆಹಿಡಿಯಬೇಕೆಂದು ಅಭಿಪ್ರಾಯ ಪಟ್ಟಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು, ಪ್ರಾರಂಭ ಮತ್ತು ಅನ್ವಯ.**– (1) ಈ ಅಧಿನಿಯಮವನ್ನು ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

(3) ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ರಲ್ಲಿ (2006ರ ಕರ್ನಾಟಕ ಅಧಿನಿಯಮ 8) ಏನೇ ಒಳಗೊಂಡಿದ್ದರೂ 2013–14ನೇ ಶೈಕ್ಷಣಿಕ ವರ್ಷಕ್ಕಾಗಿ ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಪ್ರವೇಶಗಳು ಮತ್ತು ಶುಲ್ಕ ನಿಗದಿಯು ಈ ಅಧಿನಿಯಮದ ಉಪಬಂಧಗಳ ಅನುಸಾರವಾಗಿ ನಡೆಯತಕ್ಕದ್ದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ ಸಂದರ್ಭಕ್ಕೆ ಅನ್ಯಥಾ ಅಗತ್ಯವಿದ್ದ ಹೊರತು,–

(ಎ) "ಸಾಮಾನ್ಯ ಪ್ರವೇಶ ಪರೀಕ್ಷೆ" ಎಂದರೆ, ಏಕಗವಾಕ್ಷಿ ಪ್ರಕ್ರಿಯೆಯ ಮೂಲಕ ವೃತ್ತಿ ಶಿಕ್ಷಣ ವ್ಯಾಸಂಗ ಕ್ರಮಗಳಿಗೆ ಪ್ರವೇಶ ನೀಡುವ ಉದ್ದೇಶಕ್ಕಾಗಿ ಅಭ್ಯರ್ಥಿಗಳ ಅರ್ಹತೆ (ಮೆರಿಟ್) ಯನ್ನು ನಿರ್ಧರಿಸುವುದಕ್ಕಾಗಿ ನಡೆಸಲಾಗುವ ಪ್ರವೇಶ ಪರೀಕ್ಷೆ ಮತ್ತು ತರುವಾಯದ ಕೇಂದ್ರೀಯ ಕೌನ್ಸಿಲಿಂಗ್ ವ್ಯವಸ್ಥೆ;

(ಬಿ) "ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕ" ಎಂದರೆ, ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸುವ ರಾಜ್ಯ ಸರ್ಕಾರದ ಕರ್ನಾಟಕ ಪರೀಕ್ಷಾ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಏಜೆನ್ಸಿ;

(ಸಿ) "ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ" ಎಂದರೆ, ವೃತ್ತಿ ಶಿಕ್ಷಣ ಕೋರ್ಸುಗಳಿಗೆ ಪ್ರವೇಶ ಮತ್ತು ಶುಲ್ಕ ನಿಗದಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರ ಮತ್ತು ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ತಮ್ಮ ನಡುವೆ ಮಾಡಿಕೊಳ್ಳಬಹುದಾದ ಯಾವುದೇ ಒಪ್ಪಂದ;

(ಡಿ) "ಸಂಸ್ಥೆ" ಎಂದರೆ, ವೃತ್ತಿ ಶಿಕ್ಷಣ ಕೋರ್ಸ್‌ಗಳ ವಿದ್ಯಾಭ್ಯಾಸ ನೀಡುತ್ತಿರುವ ವೃತ್ತಿ ಶಿಕ್ಷಣ ಸಂಸ್ಥೆಗಳು;

(ಇ) "ಏಕ ಸದಸ್ಯ ನಿಯಂತ್ರಕ ಸಮಿತಿ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರವು ರಚಿಸಿದ ಸಮಿತಿ;

(ಎಫ್) "ವೃತ್ತಿ ಶಿಕ್ಷಣ ಕೋರ್ಸುಗಳು" ಎಂದರೆ,–

(i) ವೈದ್ಯಕೀಯ ಮತ್ತು ದಂತ ವೈದ್ಯ ಶಿಕ್ಷಣ ಸಂಸ್ಥೆಗಳಲ್ಲಿ,–

(ಎ) ಬ್ಯಾಚುಲರ್ ಆಫ್ ಮೆಡಿಸಿನ್ ಮತ್ತು ಬ್ಯಾಚುಲರ್ ಆಫ್ ಸರ್ಜರಿ; ಮತ್ತು

(ಬಿ) ಬ್ಯಾಚುಲರ್ ಆಫ್ ಡೆಂಟಲ್ ಸರ್ಜರಿ

(ii) ಇಂಜಿನಿಯರಿಂಗ್ ಸಂಸ್ಥೆಗಳಲ್ಲಿ,–

(ಎ) ಬ್ಯಾಚುಲರ್ ಆಫ್ ಇಂಜಿನಿಯರಿಂಗ್;

(ಬಿ) ಬ್ಯಾಚುಲರ್ ಆಫ್ ಟೆಕ್ನಾಲಜಿ;

(ಸಿ) ಬ್ಯಾಚುಲರ್ ಆಫ್ ಆರ್ಕಿಟೆಕ್ಚರ್; ಮತ್ತು

(iii) ವೈದ್ಯಕೀಯ ಮತ್ತು ದಂತ ವಿಜ್ಞಾನಗಳ ಸ್ನಾತಕೋತ್ತರ ಪದವಿ ಮತ್ತು ಡಿಪ್ಲೊಮೊ ಕೋರ್ಸುಗಳು; ಮತ್ತು

(iv) ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದ ಅಂಥ ಇತರ ಕೋರ್ಸುಗಳು.

(ಜಿ) "ಅನುದಾನಿತವಲ್ಲದ ಸಂಸ್ಥೆ" ಎಂದರೆ, ರಾಜ್ಯ ಸರ್ಕಾರದಿಂದ ಅನುದಾನವನ್ನು ಅಥವಾ ಸಹಾಯಾನುದಾನವನ್ನು ಸ್ವೀಕರಿಸದ ಯಾವುದೇ ಖಾಸಗಿ ಆಡಳಿತವುಳ್ಳ ವೃತ್ತಿ ಶಿಕ್ಷಣ ಸಂಸ್ಥೆ.

**3. ಏಕ ಸದಸ್ಯ ನಿಯಂತ್ರಕ ಸಮಿತಿಯ ರಚನೆ.–** ರಾಜ್ಯದ ಯಾವುದೇ ವಿಶ್ವವಿದ್ಯಾಲಯದ ಮಾಜಿ ಕುಲಪತಿಯವರು ಸದಸ್ಯರಾಗಿರುವ, ರಾಜ್ಯ ಸರ್ಕಾರವು ನೇಮಿಸಿದ ಒಂದು ಏಕ ಸದಸ್ಯ ನಿಯಂತ್ರಕ ಸಮಿತಿಯು ಇರತಕ್ಕದ್ದು. ಸದರಿ ಏಕಸದಸ್ಯ ನಿಯಂತ್ರಕ ಸಮಿತಿಯು, ವೃತ್ತಿ ಶಿಕ್ಷಣ ಕೋರ್ಸುಗಳಿಗೆ ಪ್ರವೇಶದ ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಮಾಡಿಕೊಂಡ ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದದ ಪರಿಣಾಮಕಾರಿ ಅನುಷ್ಠಾನದ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**4. ಶುಲ್ಕದ ನಿಗದಿ.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಜಾರಿಯಲ್ಲಿರುವ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಬಂಧದಲ್ಲಿ ನಿಗದಿಪಡಿಸಿದ ಶುಲ್ಕ ಏನೇ ಇದ್ದರೂ, ರಾಜ್ಯ ಸರ್ಕಾರವು, ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದ ಅನುಸಾರವಾಗಿ, ಅಧಿಸೂಚನೆಯ ಮೂಲಕ, ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಪ್ರವೇಶಕ್ಕೆ ಸಂದಾಯಮಾಡಬೇಕಾದ ಶುಲ್ಕವನ್ನು ನಿಗದಿಗೊಳಿಸಬಹುದು. ಬೇರೆ ಬೇರೆ ಪ್ರವರ್ಗದ ವಿದ್ಯಾರ್ಥಿಗಳಿಗೆ ಬೇರೆ ಬೇರೆ ಶುಲ್ಕದ ದರವನ್ನು ನಿಗದಿಗೊಳಿಸಬಹುದು.

**5. ಪ್ರವೇಶ ನಿಯಂತ್ರಣ ಮತ್ತು ಸೀಟು ಹಂಚಿಕೆ ಪ್ರಮಾಣ.–** ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕಾಗಿ, ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಯಲ್ಲಿ ಸೀಟುಗಳನ್ನು ಈ ಮುಂದಿನ ರೀತಿಯಲ್ಲಿ ಭರ್ತಿ ಮಾಡತಕ್ಕದ್ದು, ಎಂದರೆ:–

(i) 2013–14ನೇ ವರ್ಷಕ್ಕೆ, ಸರ್ಕಾರವು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದಡಿಯಲ್ಲಿ ಒಪ್ಪಬಹುದಾದ ಅಂಥ ಸಂಖ್ಯೆಯ ಸೀಟುಗಳನ್ನು ಕಾಲಕಾಲಕ್ಕೆ ತಿದ್ದುಪಡಿಯಾದಂತೆ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಸರ್ಕಾರಿ ಸೀಟುಗಳಿಗೆ ಪ್ರವೇಶಕ್ಕಾಗಿ ವಿದ್ಯಾರ್ಥಿಗಳ ಆಯ್ಕೆ ನಿಯಮಗಳು, 2006ಕ್ಕೆ ಅನುಸಾರವಾಗಿ ಸಾಮಾನ್ಯ ಪ್ರವೇಶ ಪರೀಕ್ಷೆ ಘಟಕದ ಮೂಲಕ ತುಂಬತಕ್ಕದ್ದು.

(ii) ಉಳಿದ ಸೀಟುಗಳನ್ನು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದದಲ್ಲಿ ಅನ್ಯಥಾ ನಿರ್ದಿಷ್ಟಪಡಿಸಿದ ಹೊರತು, ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು, ನಿರ್ಧರಿಸಲಾದ ಅರ್ಹತೆಯ ಆಧಾರದ ಮೇಲೆ ನ್ಯಾಯಯುತ ಹಾಗೂ ಪಾರದರ್ಶಕ ರೀತಿಯಲ್ಲಿ ಹಾಗೂ ಕೇಂದ್ರೀಕೃತ ಕೌನ್ಸಿಲಿಂಗ್ ನಡೆಸುವ ಮೂಲಕ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ಅಥವಾ ಸಂದರ್ಭಾನುಸಾರವಾಗಿ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರ ಸಂಸ್ಥೆಗಳ ಸಂಘವು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ತುಂಬತಕ್ಕದ್ದು.

(2) ರಾಜ್ಯ ಸರ್ಕಾರದ ಮೀಸಲಾತಿ ನೀತಿ ಮತ್ತು ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಒಳಪಟ್ಟು, ರಾಜ್ಯ ಸರ್ಕಾರವು, ವಿವಿಧ ಪ್ರವರ್ಗದ ಸಂಸ್ಥೆಗಳ ಸಂಬಂಧದಲ್ಲಿ ವಿವಿಧ ಪ್ರವರ್ಗದ ವಿದ್ಯಾರ್ಥಿಗಳನ್ನು ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕದವರು ಹಾಗೂ ಆಡಳಿತ ಮಂಡಳಿಯವರು ತುಂಬಬೇಕಾದ ಸೀಟುಗಳ ಹಂಚಿಕೆ ಪ್ರಮಾಣವನ್ನು ಅಧಿಸೂಚನೆಯ ಮೂಲಕ ಪ್ರಕಟಿಸಬಹುದು.

**6. ಈ ಅಧಿನಿಯಮವನ್ನು ಉಲ್ಲಂಘಿಸಿ ಮಾಡಿದ ಪ್ರವೇಶಗಳು ಅಸಿಂಧುವಾಗಿರುವುದು.–** ಈ ಅಧಿನಿಯಮದ ಉಪಬಂಧಗಳನ್ನು ಅಥವಾ ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದವನ್ನು ಉಲ್ಲಂಘಿಸಿ ಯಾವುವೇ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳು 2013–14ನೇ ಶೈಕ್ಷಣಿಕ ವರ್ಷಕ್ಕಾಗಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಅಥವಾ ತರುವಾಯ ಮಾಡಿದ ಎಲ್ಲ ಪ್ರವೇಶಗಳು ಅಸಿಂಧುವಾಗಿರತಕ್ಕದ್ದು. ಅಂಥ ಉಲ್ಲಂಘನೆಯ ಸಂಬಂಧದಲ್ಲಿ, ರಾಜ್ಯ ಸರ್ಕಾರವು ಅಂಥ ಪ್ರವೇಶಗಳನ್ನು ಅಥವಾ ಸಂದರ್ಭಾನುಸಾರವಾಗಿ ಅಂಥ ಸಂಸ್ಥೆಯ ಸಂಯೋಜನೆಯನ್ನು ರದ್ದುಪಡಿಸುವುದಕ್ಕೆ ಸಂಬಂಧಪಟ್ಟ ವಿಶ್ವವಿದ್ಯಾಲಯಕ್ಕೆ ನಿರ್ದೇಶಿಸಬಹುದು.

**7. ತೊಂದರೆಗಳನ್ನು ನಿವಾರಿಸುವ ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಗಳನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು.

**8. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಪೂರ್ವಾನ್ವಯವಾಗಿ ಅಥವಾ ಉತ್ತರಾನ್ವಯವಾಗಿ, ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚಿನ ನಿರಂತರ ಅಧಿವೇಶನಗಳಲ್ಲಿ

ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳವರೆಗೆ ಅಧಿವೇಶನದಲ್ಲಿರುವಾಗ, ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ವಿಧಾನಮಂಡಲದ ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಟು ಮಾಡಬೇಕೆಂದು ಒಪ್ಪಿದರೆ ಅಥವಾ ನಿಯಮವನ್ನು ರಚಿಸಬಾರದೆಂದು ತೀರ್ಮಾನಿಸಿದರೆ, ಆ ತರುವಾಯ ಅಂಥ ನಿಯಮವು ಸಂದರ್ಭಾನುಸಾರವಾಗಿ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವಾಗತಕ್ಕದ್ದಲ್ಲ.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ರಾಜ್ಯ ಸರ್ಕಾರ ಮತ್ತು ವೃತ್ತಿ ಶಿಕ್ಷಣ ಕೋರ್ಸುಗಳ ಶಿಕ್ಷಣ ನೀಡುತ್ತಿರುವ ಅನುದಾನಿತವಲ್ಲದ ಖಾಸಗಿ ಶಿಕ್ಷಣ ಸಂಸ್ಥೆಗಳ ನಡುವೆ ಮಾಡಿಕೊಳ್ಳಲು ಪ್ರಸ್ತಾವಿಸಲಾದ ಸಮ್ಮತಾಭಿಪ್ರಾಯದ ಒಪ್ಪಂದಕ್ಕೆ ಮಾನ್ಯತೆ ನೀಡುವುದಕ್ಕಾಗಿ ಮತ್ತು 2005 (6) ಎಸ್‌ಸಿಸಿ 537 ರಲ್ಲಿ ವರದಿಯಾದ ಪಿ.ಎ. ಇನಾಂದಾರ್ ಮತ್ತು ಇತರರು–ವಿರುದ್ಧ–ಮಹಾರಾಷ್ಟ್ರ ರಾಜ್ಯ – ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಉಪಬಂಧಿಸಲಾದಂಥ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ವಿಧೇಯಕ.

ರಾಜ್ಯ ಸರ್ಕಾರವು, ಕರ್ನಾಟಕ ನಿವಾಸಿ ವಿದ್ಯಾರ್ಥಿಗಳ ಮತ್ತು ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳ ಹಿತರಕ್ಷಣೆಗಾಗಿ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳೊಡನೆ 2006–07, 2007–08, 2008–09, 2009–10, 2010–11, 2011–12 ಮತ್ತು 2012–13ನೇ ಶೈಕ್ಷಣಿಕ ವರ್ಷಗಳಿಗೆ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದ ಮಾಡಿಕೊಂಡಿರುವ ಹಿನ್ನೆಲೆಯಲ್ಲಿ ಮತ್ತು 2013–14ನೇ ಶೈಕ್ಷಣಿಕ ವರ್ಷಕ್ಕಾಗಿ ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದವನ್ನು ಮಾಡಿಕೊಳ್ಳಲು ಉದ್ದೇಶಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ನ್ನು 2013–14ನೇ ಶೈಕ್ಷಣಿಕ ವರ್ಷಕ್ಕೆ ಖಾಸಗಿ ಅನುದಾನಿತವಲ್ಲದ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಮತ್ತು ಶುಲ್ಕ ನಿಗದಿಗಾಗಿ ತಡೆಹಿಡಿಯುವುದು ಅವಶ್ಯವೆಂದು ಅಭಿಪ್ರಾಯಪಡಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತು ಜ್ಞಾಪನ ಪತ್ರ**

**ಖಂಡ–5** (1)ನೇ ಉಪಖಂಡದ (ii)ನೇ ಬಾಬು, ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘ ಅಥವಾ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರ ಸಂಸ್ಥೆಗಳ ಸಂಘವು ನಡೆಸಿದ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಉಳಿದ ಸೀಟುಗಳನ್ನು ಭರ್ತಿ ಮಾಡಲು ಅರ್ಹತೆಯನ್ನು ನಿರ್ಧರಿಸಲು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ–8** ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ, ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಆರ್.ವಿ. ದೇಶಪಾಂಡೆ**
ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## KARNATAKA LEGISLATIVE ASSEMBLY

### FOURTEENTH LEGISLATIVE ASSEMBLY

### FIRST SESSION

## THE KARNATAKA PROFESSIONAL EDUCATIONAL INSTITUTIONS (REGULATION OF ADMISSION AND FIXATION OF FEE) (SPECIAL PROVISIONS) BILL, 2013

### (L.A. Bill No. 01 of 2013)

A Bill to provide for recognition of the consensual arrangement or agreement proposed to be entered into between the State Government and the Private Unaided Educational Institutions imparting Professional Educational Courses and for other matters, as provided in the judgment of the Supreme Court of India in P.A. Inamdar and others Vs. State of Maharashtra reported in 2005(6) SCC 537.

Whereas it is expedient, to protect the interest of the students of Karnataka domicile and students belonging to educationally and socially backward classes, State Government have entered into a consensual arrangement or agreement with the Private Unaided Professional Educational Institutions for the years 2006-2007, 2007-2008, 2008-09, 2009-10, 2010-11, 2011-12 and 2012-13 and has proposed to enter into a consensual arrangement or agreement for the year

2013-2014 and consider that the Karnataka Professional Educational Institutions (Regulation of Admission and Determination of Fee) Act, 2006 (Karnataka Act 8 of 2006) be kept in abeyance for admission and fixation of fee in Private Unaided Professional Educational Institutions for the academic year 2013-14 and for other purposes hereinafter appearing;

Be it enacted by the Karnataka State Legislature in the sixty fourth year of the Republic of India, as follows:-

**1. Short title, commencement and application**.- (1) This Act may be called the Karnataka Professional Educational Institutions (Regulation of Admission and Fixation of Fee) (Special Provisions) Act, 2013.

(2) It shall come into force at once.

(3) Notwithstanding anything contained in the Karnataka Professional Educational Institutions (Regulation of Admission and Determination of Fee) Act, 2006 (Karnataka Act 8 of 2006), admissions and fixation of fee in an un-aided Private Professional Educational Institution for the academic year 2013-14 shall be governed by the provisions of this Act.

**2. Definitions**.- In this Act, unless the context otherwise requires,-

(a) **"Common Entrance Test"** means the entrance test conducted for determination of merit of the candidates followed by centralized counseling for the purpose of admission to professional educational courses through a single window procedure;

(b) **"Common Entrance Test Cell"** means the agency called the Karnataka Examination Authority of the State Government which conducts the common entrance test;

(c) **"Consensual arrangement or agreement"** means any agreement that may be entered into between the State Government and association of unaided Private Professional Educational Institutions relating to admission and fixation of fee in professional courses;

(d) **"Institution"** means Professional Educational Institutions offering Professional Educational courses;

(e) **"One Man Regulatory Committee"** means the Committee constituted by the State Government under section 3;

(f) **"Professional Educational Courses" means,-**

(i) In Medical and Dental Institutions,-

(a) Bachelor of Medicine and Bachelor of Surgery; and

(b) Bachelor of Dental Surgery.

(ii) In Engineering Institutions,-

(a) Bachelor of Engineering;

(b) Bachelor of Technology;

(c) Bachelor of Architecture; and

(iii) Post Graduate Degree and Diploma Courses in Medical and Dental Sciences; and

(iv) such other courses as may be notified by the State Government

(g) **"Unaided institution"** means any privately managed professional educational institution, which is not receiving aid or grant-in-aid from the State Government.

**3. Constitution of One Man Regulatory Committee**.-There shall be a One-Man Regulatory Committee appointed by the State Government, who shall be a former Vice-Chancellor of any University in the State. The said One-Man Regulatory Committee shall monitor the effective implementation of the admissions to professional educational courses and the implementation of the consensual arrangement or agreement done in accordance with the provisions of this Act.

**4. Fixation of fee**.- Notwithstanding the fee fixed in respect of Professional Educational Courses which are in force on the date of commencement of this Act, the State Government may, in accordance with the consensual arrangement or agreement, by notification, fix the fee payable for admission to the Unaided Private Professional Educational Courses. Different rates of fees may be fixed for different categories of students.

**5. Regulation of admission and seat matrix.-** (1) For effective implementation of the consensual arrangement or agreement, seats in a Private Unaided Professional Educational Institution shall be filled in the following manner, namely:-

(i) for the year 2013-14 such number of seats as may be agreed to by the Government under the consensual arrangement or agreement shall be filled through the Common Entrance Test Cell in accordance with the Karnataka Selection of Candidates for Admission to Government seats in Professional Educational Institutions Rules, 2006 as amended from time to time.

(ii) the remaining seats shall be filled through the Common Entrance Test conducted by the association of Private Professional Educational Institutions or the association of religious and linguistic minority

**13. ಸಕ್ಷಮ ಪ್ರಾಧಿಕಾರದ ತೀರ್ಮಾನಗಳ ಬಗ್ಗೆ ಮೇಲ್ಮನವಿ :–**

ಅ. ಒಬ್ಬ ಸರ್ಕಾರಿ ನೌಕರನು ವರ್ಗಾವಣೆ ಆದೇಶ ಪಡೆದ ಒಂದು ವಾರದೊಳಗೆ ವರ್ಗಾವಣಾ ಆದೇಶದ ಪ್ರತಿಯೊಡನೆ ವರ್ಗಾವಣೆ ಆದೇಶವನ್ನು ಮಾರ್ಪಡಿಸಲು ಕಾರಣಗಳನ್ನು ನಮೂದಿಸಿ ಸಕ್ಷಮ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಬಹುದು;

ಆ. ಸಕ್ಷಮ ಪ್ರಾಧಿಕಾರವು ಪ್ರಕರಣದ ಎಲ್ಲ ಸನ್ನಿವೇಶಗಳನ್ನು ಪರಿಗಣಿಸಿ ಈ ಆದೇಶದ ಸೂಚನೆಗಳನ್ನು ಪಾಲಿಸಿ ಸೂಕ್ತವಾದ ಆದೇಶಗಳನ್ನು ಹೊರಡಿಸಬಹುದು.

**14. ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ವರ್ಗಾವಣೆಗಳು :–**

ಈ ಆದೇಶದಲ್ಲಿ ವ್ಯತಿರಿಕ್ತವಾಗಿ ಏನೇ ಒಳಗೊಂಡಿದ್ದರೂ ಕರ್ನಾಟಕ ಸರ್ಕಾರ ಸಚಿವಾಲಯದ ಸರ್ಕಾರಿ ನೌಕರರ ಚಲನವಲನದ ಬಗ್ಗೆ **ಅನುಬಂಧ–1**ರಲ್ಲಿ ಸೂಚಿಸಿರುವಂತೆ ನಿಯಂತ್ರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವರಾಜು**
ಸರ್ಕಾರದ ಉಪ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು)

## ಅನುಬಂಧ–1

### ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿಯ ಚಲನವಲನ

1. ಕರ್ನಾಟಕ ಸರ್ಕಾರ ಸಚಿವಾಲಯವು ಕ್ಷೇತ್ರ ಇಲಾಖೆಗಳಿಗಿಂತ ಭಿನ್ನವಾಗಿದ್ದು, ಕ್ಷೇತ್ರ ಇಲಾಖೆಗಳಂತೆ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರುವುದಕ್ಕೆ ಮಾತ್ರ ಸಂಬಂಧಿಸಿರದೆ, ವಿಭಿನ್ನವಾದ ಪಾತ್ರವನ್ನು ಹೊಂದಿದೆ, ಅಂದರೆ, ಯೋಜನೆಗಳನ್ನು ರೂಪಿಸುವುದು (ಪಂಚವಾರ್ಷಿಕ ಯೋಜನೆಯೂ ಒಳಗೊಂಡಂತೆ) ಕಾರ್ಯನೀತಿ, ತಜ್ಞ/ತಾಂತ್ರಿಕ ಸಲಹೆಯನ್ನು ಕಾನೂನು, ಸಿಬ್ಬಂದಿ, ಆರ್ಥಿಕ ಮತ್ತು ಇತರ ವಿಷಯಗಳಲ್ಲಿ ಒದಗಿಸುವುದು ಹಾಗೂ ಸರ್ಕಾರದ ಭಂಡಾರದಂತೆ ಕಾರ್ಯನಿರ್ವಹಿಸುವುದೂ ಒಳಗೊಂಡಂತೆ ಕೇಂದ್ರ ಸರ್ಕಾರದೊಂದಿಗೆ / ಬಾಹ್ಯ ಏಜೆನ್ಸಿಗಳೊಂದಿಗೆ ವ್ಯವಹರಿಸುವುದು. ಅಲ್ಲದೆ ಕರ್ನಾಟಕ ಸರ್ಕಾರ ಸಚಿವಾಲಯವು ಏಕ ಘಟಕ ಕಛೇರಿ. ಆದುದರಿಂದ, ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿಗೆ ಸಂಬಂಧಿಸಿದಂತೆ 'ವರ್ಗಾವಣೆ' ಪದಕ್ಕೆ ಬದಲಾಗಿ 'ಚಲನವಲನ' ಪದವನ್ನು ಬಳಸಲಾಗಿದೆ.

2. ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಸಿಬ್ಬಂದಿಯ ಚಲನವಲನದ ಉದ್ದೇಶಕ್ಕಾಗಿ ಕರ್ನಾಟಕ ಸರ್ಕಾರ ಸಚಿವಾಲಯದ ವಿವಿಧ ಇಲಾಖೆಗಳನ್ನು 4 ಪ್ರವರ್ಗಗಳಾಗಿ ವಿಂಗಡಿಸಲಾಗಿದೆ. ಅಂದರೆ ಕೆಳಗೆ ನಿರ್ದಿಷ್ಟಪಡಿಸಿರುವಂತೆ:– ಅಭಿವೃದ್ಧಿ ಇಲಾಖೆಗಳು, ನಿಯಂತ್ರಿಸುವ ಇಲಾಖೆಗಳು, ಸೇವಾ ಇಲಾಖೆಗಳು ಮತ್ತು ತಾಂತ್ರಿಕ / ಪರಿಣಿತ ಇಲಾಖೆಗಳು.

| **ಅಭಿವೃದ್ಧಿ ಇಲಾಖೆಗಳು** | **ನಿಯಂತ್ರಣಾ ಇಲಾಖೆಗಳು** | **ಸೇವಾನಿರತ ಇಲಾಖೆಗಳು** | **ತಾಂತ್ರಿಕ / ಪರಿಣಿತ ಇಲಾಖೆಗಳು** |
|---|---|---|---|
| 1) ಕೃಷಿ | 1) ಸಹಕಾರ | 1) ಶಿಕ್ಷಣ | 1) ಕಾನೂನು |
| 2) ತೋಟಗಾರಿಕೆ | 2) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ (ಸಿಆಸು ಇಲಾಖೆಯ ಸೇವಾ ನಿಯಮಗಳು ವಿಭಾಗವನ್ನು ಹೊರತುಪಡಿಸಿ) | 2) ಆರೋಗ್ಯ ಮತ್ತು ಕುಟುಂಬ ಕಲ್ಯಾಣ | 2) ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |
| 3) ಪಶುಸಂ ಗೋಪನೆ ಮತ್ತು ಮೀನುಗಾರಿಕೆ | 3) ಇಂಧನ | 3) ವಸತಿ | 3) ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ |
| 4) ವಾಣಿಜ್ಯ ಮತ್ತು ಕೈಗಾರಿಕೆ | 4) ಆಹಾರ ಮತ್ತು ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳು | 4) ಪ್ರವಾಸೋದ್ಯಮ | 4) ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ |
| 5) ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲ ಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ | 5) ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | 5) ಯುವಜನಸೇವಾ | 5) ಸಿಆಸು ಇಲಾಖೆಯ ಸೇವಾ ನಿಯಮಗಳು ವಿಭಾಗ |
| 6) ಗ್ರಾಮೀಣಾಭಿ ವೃದ್ಧಿ ಮತ್ತು ಪಂಚಾಯತ್ ರಾಜ್ | 6) ಒಳಾಡಳಿತ | 6) ಮೂಲಸೌಕರ್ಯ ಅಭಿವೃದ್ಧಿ | 6) ಆರ್ಥಿಕ |

| ಅಭಿವೃದ್ಧಿ ಇಲಾಖೆಗಳು | ನಿಯಂತ್ರಣಾ ಇಲಾಖೆಗಳು | ಸೇವಾನಿರತ ಇಲಾಖೆಗಳು | ತಾಂತ್ರಿಕ / ಪರಿಣಿತ ಇಲಾಖೆಗಳು |
|---|---|---|---|
| | 7) ಸಾರಿಗೆ | 7) ಜಲಸಂಪನ್ಮೂಲ | |
| | 8) ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ | 8) ವೈದ್ಯಕೀಯ ಶಿಕ್ಷಣ | |
| | 9) ಕಾರ್ಮಿಕ | 9) ಸಮಾಜ ಕಲ್ಯಾಣ | |
| | 10) ಕಂದಾಯ | 10) ಸಾರ್ವಜನಿಕ ಉದ್ದಿಮೆಗಳು | |
| | 11) ನಗರಾಭಿವೃದ್ಧಿ | | |

3. ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು, 1977ರನ್ವಯ, ಕರ್ನಾಟಕ ಸರ್ಕಾರ ಸಚಿವಾಲಯದ ಪ್ರತಿ ಇಲಾಖೆಯ ಕಾರ್ಯವನ್ನು ಹಂಚಿಕೆ ಮಾಡಲಾಗಿದೆ. ಪ್ರತಿ ಇಲಾಖೆಯು ತನಗೆ ಹಂಚಿಕೆ ಮಾಡಲಾದಂತೆ ಕೆಲವು ವಿಶಿಷ್ಠ ಚಟುವಟಿಕೆಗಳು, ಅಧಿನಿಯಮಗಳು, ನಿಯಮಗಳು, ವಿನಿಯಮಯಗಳು ಮುಂತಾದವುಗಳ ಬಗ್ಗೆ ವ್ಯವಹರಿಸುತ್ತದೆ. ಕರ್ನಾಟಕ ಸರ್ಕಾರ ಸಚಿವಾಲಯದ ಒಂದು ಇಲಾಖೆಗೆ ಹಂಚಿಕೆ ಮಾಡಲಾದ ನೌಕರ ಸಿಬ್ಬಂದಿಯು ಇಲಾಖೆಗೆ ಸಂಬಂಧಿಸಿದ ಕೆಲಸದ ಪರಿಚಯ ಪಡೆಯಲು ಹಾಗೂ ಪ್ರಾವೀಣ್ಯತೆ ಹೊಂದಲು ಮತ್ತು ತನಗೆ ಹಂಚಿಕೆ ಮಾಡಲಾದ ಕೆಲಸದಲ್ಲಿ ನೈಪುಣ್ಯತೆಯನ್ನು ಪಡೆಯಲು ಸಕಾರಣವಾದ ಕಾಲಾವಕಾಶ ಬೇಕಾಗುತ್ತದೆ.

4. ಮೇಲೆ ತಿಳಿಸಿದ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿಯ ಚಲನವಲನ ಮತ್ತು ಅವರ ತರಬೇತಿಯನ್ನು ಕೆಳಗೆ ತಿಳಿಸಿದಂತೆ ನಿಯಂತ್ರಿಸಲಾಗುತ್ತದೆ:–

(ಅ) ಒಂದು ಇಲಾಖೆಯಲ್ಲಿ ಕನಿಷ್ಠ ಸೇವಾ ಅವಧಿಯು ಈ ಕೆಳಕಂಡಂತಿದೆ:–

| ಹುದ್ದೆ | ಅಭಿವೃದ್ಧಿ ಇಲಾಖೆಗಳು | | ನಿಯಂತ್ರಣಾ ಇಲಾಖೆಗಳು | | ಸೇವಾ ನಿರತ ಇಲಾಖೆಗಳು | | ತಾಂತ್ರಿಕ/ಪರಿಣಿತ ಇಲಾಖೆಗಳು | |
|---|---|---|---|---|---|---|---|---|
| | ಕನಿಷ್ಠ | ಗರಿಷ್ಠ | ಕನಿಷ್ಠ | ಗರಿಷ್ಠ | ಕನಿಷ್ಠ | ಗರಿಷ್ಠ | ಕನಿಷ್ಠ | ಗರಿಷ್ಠ |
| (1) | (2) | (3) | (4) | (5) | (6) | (7) | (8) | (9) |
| ಅಪರ / ಜಂಟಿ / ಉಪ ಕಾರ್ಯದರ್ಶಿ | 3 ವರ್ಷಗಳು | 6 ವರ್ಷಗಳು | 3 ವರ್ಷಗಳು | 6 ವರ್ಷಗಳು | 3 ವರ್ಷಗಳು | 6 ವರ್ಷಗಳು | 5 ವರ್ಷಗಳು | ಮಿತಿ ಇಲ್ಲ |
| ಅಧೀನ ಕಾರ್ಯದರ್ಶಿ/ ಶಾಖಾಧಿಕಾರಿಗಳು | 3 ವರ್ಷಗಳು | 6 ವರ್ಷಗಳು | 3 ವರ್ಷಗಳು | 6 ವರ್ಷಗಳು | 3 ವರ್ಷಗಳು | 6 ವರ್ಷಗಳು | 5 ವರ್ಷಗಳು | ಮಿತಿ ಇಲ್ಲ |
| ಹಿ. ಸಹಾಯಕರು/ ಸಹಾಯಕರು | 5 ವರ್ಷಗಳು | 7 ವರ್ಷಗಳು | 5 ವರ್ಷಗಳು | 7 ವರ್ಷಗಳು | 5 ವರ್ಷಗಳು | 7 ವರ್ಷಗಳು | 6 ವರ್ಷಗಳು | ಮಿತಿ ಇಲ್ಲ |
| ಕಿ. ಸಹಾಯಕರು/ ಗ್ರೂಪ್–ಡಿ | 5 ವರ್ಷಗಳು | 7 ವರ್ಷಗಳು | 5 ವರ್ಷಗಳು | 7 ವರ್ಷಗಳು | 5 ವರ್ಷಗಳು | 7 ವರ್ಷಗಳು | 6 ವರ್ಷಗಳು | 7 ವರ್ಷಗಳು |

ಮೇಲೆ ತಿಳಿಸಿದ ಅವಧಿಯು ಕೆಳಗಿನ ಅಂಶ (ಆ)ರಲ್ಲಿ ತಿಳಿಸಿದ ತರಬೇತಿ ಅವಧಿಯನ್ನು ಹೊರತುಪಡಿಸಲಾಗಿದೆ.

(ಆ) ಸಹಾಯಕರು, ಹಿರಿಯ ಸಹಾಯಕರು, ಶಾಖಾಧಿಕಾರಿಗಳು, ಅಧೀನ ಕಾರ್ಯದರ್ಶಿಗಳು ಹುದ್ದೆಗಳನ್ನು ಹೊಂದಿದ ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಪ್ರತಿ ಸದಸ್ಯರನ್ನು ಕ್ಷೇತ್ರ ಇಲಾಖೆಗೆ 2 ವರ್ಷಗಳ ಅವಧಿಗೆ ಸೇವೆಗೆ ಸೇರಿದ 5 ವರ್ಷದ ಅವಧಿಯೊಳಗೆ ನಿಯೋಜಿಸತಕ್ಕದ್ದು.

ಪರಂತು, 52 ವರ್ಷ ವಯಸ್ಸು ಹೊಂದಿದವರನ್ನು ಈ ರೀತಿ ನಿಯೋಜಿಸತಕ್ಕದ್ದಲ್ಲ.

(ಇ) ಸಂಬಂಧಪಟ್ಟ ಸರ್ಕಾರದ ಪ್ರಧಾನ ಕಾರ್ಯದರ್ಶಿ / ಸರ್ಕಾರದ ಕಾರ್ಯದರ್ಶಿ ತಮ್ಮ ಇಲಾಖೆಯ ಅಧಿಕಾರಿಗಳನ್ನು ತಮ್ಮ ಇಲಾಖೆಯೊಳಗೆ ಸುತ್ತಿಸಬಹುದು.

(ಈ) ಆದರೂ, ಒಂದು ವೇಳೆ ಯಾವುದಾದರೂ ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರು ಮೇಲಿನ ಕಂಡಿಕೆ–5ರಲ್ಲಿ ಹೇಳಿರುವ ಕನಿಷ್ಠ ಅವಧಿಯನ್ನು ಪೂರೈಸದಿರುವ ಯಾವುದೇ ಒಬ್ಬ ಅಧಿಕಾರಿಯ ಸೇವೆಯನ್ನು ಸಿಆಸು ಇಲಾಖೆಗೆ ಹಿಂದಿರುಗಿಸಬೇಕೆಂದು ತೀರ್ಮಾನಿಸಿದಲ್ಲಿ ಅದಕ್ಕೆ ಸಕಾರಣಗಳನ್ನು ದಾಖಲಿಸಿ, ಸಿಆಸು ಇಲಾಖೆಯ ಪೂರ್ವಾನುಮತಿಯನ್ನು ಪಡೆಯಬೇಕು. ಆದರೆ ದುರ್ನಡತೆಯ ಆರೋಪವು ಯಾವುದೇ ಅಧಿಕಾರಿಯ ಸೇವೆಯನ್ನು ಸಿಆಸು ಇಲಾಖೆಗೆ ಹಿಂದಿರುಗಿಸಲು ಕಾರಣವಾಗುವುದಿಲ್ಲ. ಅಂತಹ ಪ್ರಕರಣಗಳಲ್ಲಿ ಸೂಕ್ತ ಶಿಸ್ತು ಕ್ರಮವನ್ನು ಪ್ರಾರಂಭಿಸಲು ಕ್ರಮ ತೆಗೆದುಕೊಳ್ಳಬೇಕು.

(ಉ) ಸಾಧ್ಯವಾದಷ್ಟು ಮಟ್ಟಿಗೆ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿಯ ಚಲನವಲನವನ್ನು ಮೇಲಿನ ಕಂಡಿಕೆ–2ರಲ್ಲಿ ನಮೂದಿಸಿರುವ 4 ಪ್ರವರ್ಗಗಳಿಗೆ ಸೇರಿದ ಇಲಾಖೆಗಳಲ್ಲಿಯೇ ಮಾಡಲು ಖಾತರಿಪಡಿಸಿಕೊಳ್ಳತಕ್ಕದ್ದು.

**ಅನುಬಂಧ–2**

**ವರ್ಗಾವಣೆಗಳ ವಿವರಗಳು**

**--------------------------- ಇಲಾಖೆ**

**ಅವಧಿ ________ ಯಿಂದ __________ ವರೆಗೆ**

| ಕ್ರ ಸಂ | | | 1 | 2 | 3 | 4 | 5 |
|---|---|---|---|---|---|---|---|
| 1 | ಇಲಾಖೆಯ ಹೆಸರು | | | | | | |
| 2. | ಹುದ್ದೆಯ ಹೆಸರು | | | | | | |
| 3. | ವೃಂದ ಬಲ | | | | | | |
| 4. | ಅನುಮತಿಸಲಾದ ವರ್ಗಾವಣೆಗಳ ಸಂಖ್ಯೆ | | | | | | |
| 5. | ಮಾಡಲಾದ ವರ್ಗಾವಣೆಗಳ ಸಂಖ್ಯೆ | | | | | | |
| | i. | ಸಾರ್ವಜನಿಕ ಹಿತಾಸಕ್ತಿಯಲ್ಲಿ | | | | | |
| | ii | ಕೋರಿಕೆ ಮೇರೆಗೆ | | | | | |
| | iii | ಅವಧಿಪೂರ್ವ ವರ್ಗಾವಣೆಗಳು | | | | | |
| | iv. | ಅವಧಿ ಮೀರಿದ ವರ್ಗಾವಣೆಗಳು | | | | | |
| 6. | ವ್ಯತ್ಯಾಸ (4–5) | | | | | | |
| 7. | ಹೆಚ್ಚಿನ ವರ್ಗಾವಣೆಗಳನ್ನು ಮಾಡಿದ್ದಲ್ಲಿ ಕಾರಣಗಳು | | | | | | |
| 8. | ಸರ್ಕಾರದ ಆದೇಶದಲ್ಲಿನ ಸೂಚನೆಗಳಂತೆ ಮುಖ್ಯಮಂತ್ರಿಯವರ ಅನುಮೋದನೆ ಪಡೆಯಲಾಗಿದೆಯೇ? ಇಲ್ಲದಿದ್ದಲ್ಲಿ, ಕಾರಣಗಳನ್ನು ತಿಳಿಸುವುದು. | | | | | | |
| 9 | ಇಲಾಖಾ ಮುಖ್ಯಸ್ಥರ ಷರಾ | | | | | | |

**ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಯವರ ಸಹಿ**

## PROCEEDINGS OF THE GOVERNMENT OF KARNATAKA
## PERSONNEL AND ADMINISTRATIVE REFORMS SECRETARIAT

**SUB :-** Guidelines regarding Transfer of Government Servants

**Read:-** Government Order No. DPAR 4 STR 2001, dated 22-11-2001.

**Preamble :**

In the Government order read above, orders were issued framing comprehensive guidelines for transfer of Government servants, as per the recommendations of the Administrative Reforms Commission under the Chairmanship of Shri Haranahalli Ramaswamy.

Thereafter, specific instructions were being issued every year for transfer of Government servants mainly in accordance with the instructions contained in the Government order read above.

It is now found expedient to regulate the transfer of Government servants to ensure their continuance in a post for a reasonable period so that they get real exposure to the activities of the department and deliver the results/ outcomes as envisaged. Further, as per the recommendation of the Karnataka Administrative Reforms Commission, it is aimed to

bring in more transparency, accountability in administration. More over, for uniform distribution of Personnel throughout the State for effective functioning of the Government, it is felt necessary to issue fresh general orders regulating the transfer of Government servants.

**Government Order No. DPAR 22 STR 2013, Bangalore, dated 7.6.2013**

For the reasons explained in the preamble and in supersession of the Government Order dated 22.11.2001, read above, Government are pleased to issue revised instructions regulating the transfer / deputation of Government servants as indicated in this Government order. These instructions shall come into effect from the year 2013-14. These guidelines are not applicable to those Government servants who are already governed by separate Acts /Rules framed for the purpose of transfer.

**2. Periodical Transfers :-**

General transfers shall be made in the months of May and June **every year.** No Government servant shall be considered for transfer **/** deputation except in the circumstances and in the manner specified in this order. For the year 2013-14, General Transfers shall be made before 30-06-2013.

**3. Explanation :-** In this order, unless the context otherwise requires;

(a) 'Competent Authority' means the Appointing Authority or such other Authority authorized to make transfer **/** deputation;

(b) 'Deputation' means transfer of a Government servant from a post in one department to an equivalent post in another department and includes deputation to en-cadre posts / ex-cadre posts / local bodies / co-operative societies / foreign service posts, as the case may be, as per the provisions of Karnataka Civil Services (General Recruitment) Rules, 1977 / Karnataka Civil Service Rules / Cadre and Recruitment Rules applicable as the case may be to the posts to which the Government servants are to be deputed;

(c) 'Group- A, B, C, D' posts means the posts under the Government, classified as Group - A, B, C, D in rule 5 of the Karnataka Civil Services (Classification, Control and Appeal) Rules, 1957;

(d) 'Transfer' means the posting of a Government servant from one headquarters to another headquarters or from one office to another within the same headquarters , to take up duties of a new post or in consequence of a change of headquarters;

**Note:-** Movement of a Government servant within the same office / unit from one post to another one or desk / compilation to another one under the same head office shall not be treated as transfer.

(i) 'Units of Seniority' means the jurisdiction of the respective Appointing Authority in respect of a post;

**4. Process of Transfer :-**

a. Transfers / deputations shall be made by the Competent Authority subject to the conditions indicated in this order, mainly in the interest of public service in a transparent manner. Transfers should as far as possible be made through Counseling on the basis of requests by giving preference to the length of service of a particular Government servant in a particular place and also by considering the various aspects as indicated in this Government Order and by considering the factors determining the inter-se priorities between the officers. Preference may also be based on the performance of the Government servant on the basis of his Annual Performance Reports.

b. The Cadre Management Authorities constituted for transferring Government servants in the Government Order read above are hereby abolished. Transfers shall hereafter be effected by the Competent authority.

**5. Restriction on transfer :-**

The Competent Authority shall ensure that the number of Government servants transferred/deputed in any year is kept to the barest minimum and ordinarily, the number of Government servants transferred / deputed in any year shall not exceed **six percent** of the total working strength of the cadre in that particular unit of seniority. Transfers / deputations should be done in such a way that no Government servant should remain on compulsory waiting.

**6. Responsibility of Competent Authority :-**

The Competent Authority**,** while effecting transfers / deputations or giving postings may further ensure that,-

(a) The Government servant against whom there are serious charges and against whom departmental proceedings/ criminal proceedings are initiated or pending or prosecution is being contemplated, shall not be posted to sensitive/ executive posts and should be posted to non-executive posts where they cannot interfere with the investigations against them. Further, a Government servant against whom a departmental enquiry / criminal case is pending should not be deputed to a post on his request.

(b) The maximum period of deputation to a particular post shall be five years at a time.

i. A Government servant shall not be considered for deputation if he has not completed the 'cooling off period' of two years in his parent department after completion of the last deputation, even if he has not completed five years in the earlier deputation. Further, deputation of a Government servant repeatedly to the same post is prohibited.

ii. Unless a suitable person is not available to fill up a particular post in a department as per the Cadre and Recruitment Rules of that Department, no Government servant shall be deputed to such posts from other Departments. Such deputations made if any, shall be reviewed every year and the deputationist shall be repatriated to the parent department soon after the availability of a suitable departmental officer to hold that post.

**7.** The transfers should not be considered beyond the month of June, except in the following circumstances by the competent authority:-

(i) Where transfer/ deputation of a Government servant is considered instead of placing him under suspension;

(ii) Where new offices/posts are created or posts have fallen vacant due to retirement, promotion, resignation, reversion, dismissal, death, compulsory retirement or when a direct recruit is to be posted on his first appointment or a promotee has to be posted on promotion or due to any unforeseen circumstances and when the posts are required to be filled immediately;

(iii) Where the transfer is necessitated in particular cases, only due to exceptional circumstances or special reasons, restricting the number of such annual transfers to minimum after recording reasons for the same in writing. **Such cases shall be submitted to the Chief Minister without fail and transfer shall be made after obtaining prior approval of the Chief Minister.**

(iv) The facility of mutual transfer / deputation shall be extended to the Government servant only once in his service and

(v) Where prima facie a complaint of serious nature is received or leveled against a Government servant to the satisfaction of the Head of the Department after ascertaining that Articles of charges/ Charge sheet have been issued to him or permission has been given for his prosecution in a competent Court of Law.

**8. Minimum period of stay at a place:-**

No Government servant shall ordinarily be transferred / deputed if he has not completed his tenure of posting in a place, as indicated below:-

| **No** | **Cadre** | **Number of years** |
|---|---|---|
| **1** | **2** | **3** |
| 1. | All Group – A posts | 3 years |
| 2. | All Group – B posts | |
| 3. | All Group – C posts | 4 years |
| 4. | All Group – D posts | 7 years |

The minimum period of stay for a particular post may be prescribed / revised from time to time by an order by the Administrative Departments of the Secretariat, with the prior approval of the Chief Minster, in respect of certain types of sensitive cadres in the departments coming under their administrative control, depending upon the nature of duties assigned to the post.

**9. Premature / delayed Transfer**

a. Generally there should be no premature transfers. The tenure of posting of a Government servant may be extended or reduced by the Competent Authority in the following cases after recording the reasons for the same in writing. The minimum period of stay at a place as prescribed in para 8 can be reduced and the concerned Government servant transferred prematurely if the competent authority feels that he or she is not suitable for discharging the duties at the present place and the reasons are recorded to this effect in writing;-

(i) The employee due for transfer after completion of tenure at a place or posting or post has less than two years of service for retirement;

(ii) The employee possesses special technical qualifications or experience for the particular job for which a suitable replacement is not immediately available;

(iii) The employees working on a project or Flagship programmes of Government of India which are in the crucial stage of implementation and his withdrawal will seriously jeopardize timely completion of such projects;

(iv) Where both the spouses are Government servants and if one of the spouses is transferred, then the other spouse may also be transferred to the same place or nearby place depending upon the availability of vacancy even if one of them has not completed the minimum period of stay;

(v) Where a female Government servant is a widow / spinster/ unmarried divorcee, she may be transferred and in case she is appointed for the first time, may be posted to a place of her choice subject to availability of vacancy;

(vi) Where a Government servant is an office-bearer of the Karnataka State Government Employees Association only, such Government servant shall not be transferred until the completion of the term for which he has been elected. In case no elections are held within three months of the completion of the said term, he may be transferred. In case he is reelected, he may be continued in the same place until the completion of the second term only.

(vii) Where a Government servant is physically handicapped / challenged or disabled subject to certification by the Medical Board;

(viii) Where a Government servant or his / her spouse or children are suffering from serious or terminal ailments, depending upon the availability of the facility of medical treatment at the requested place subject to certification by the Medical Board;

b. However, before effecting any premature transfers and for making any transfer after the transfer period, and also for extending the tenure of a Government servant for the reasons sta ted above, prior approval of the Hon'ble Chief Minister must be obtained without fail by the concerned Administrative Department of the Secretariat. The Principal Secretaries / Secretaries to Government should not under any circumstances issue transfer orders and later seek ratification/ post facto approval of the Chief Minister.

**10. Maintaining a proper balance of vacancies:-**

Notwithstanding anything to the contrary contained in this order, if the number of vacancies in any cadre in any department in any district is disproportionately large, the Competent Authority shall, as far as possible, see that the vacancies are evenly distributed among the various districts.

**11. Monitoring the transfers:-**

**Transfers will be monitored throughout the year.** Therefore, all the Competent Authorities should file a return indicating the number of transfers effected in the form appended as **ANNEXURE-2** to this order, fifteen days after the end of the General transfer period. Thereafter, these returns should be filed every three months for the periods ending September, December and March within the next fifteen days. It is the responsibility of Principal Secretaries/ Secretaries to Government to consolidate the reports of every department coming under their administrative control and send the same to DPAR periodically.

**12. Bringing political pressure regarding transfers:-**

Transfer cannot be claimed as a matter of right by the Government servants. Bringing political pressure for transfers is prohibited. If any Government servant brings political pressure regarding his posting to a particular place at any time, in contravention of the instructions contained in circular No. SI AA SU EE 26 SE NOU VA 93 dated 22.5.1993, Official Memorandum No. DPAR 41 STR 94 dated 5.8.1994 and Official Memorandum No. SI AA SU EE 54 SE NOU VA 93 dated 19-12-1994, he shall be proceeded with accordingly. It shall also be ensured that he is not posted to such a post.

**13. Review of the decisions of the Competent Authority:-**

(i) A Government servant may, within a period of one week from the date of the order of his transfer make an application to the Competent Authority accompanied by a copy of the order, seeking a review specifying therein, the reasons for the same.

(ii) The Competent Authority shall consider all the circumstances of the case and pass such orders as it deems fit subject to the Provisions contained in this order.

**14. Transfers in Karnataka Government Secretariat:-**

Notwithstanding anything to the contrary contained in this order, the movement of the Government servants belonging to the Karnataka Government Secretariat Service shall be regulated as specified in **ANNEXURE -1** appended to this order.

By order and in the name of the Governor of Karnataka
**DEVARAJU**
Deputy Secretary to Government,
Department of Personnel and
Administrative Reforms (Service Rules).

**ANNEXURE - 1**

**Government Order No.DPAR 22 STR 2013, Bangalore, dated:07-5-2013**

**Movement of the members of the Karnataka Government Secretariat Service**

**1.** Unlike the field departments, whose role mainly relates to implementing policies and programmes of Government, the Karnataka Government Secretariat has a different role, namely, formulating the plans (including the five year plan) / policies, rendering specialist / technical advice in legal, personnel, financial and such other matters, interacting with the Government of India including the external agencies and functioning as the storehouse of Government. Besides, the Karnataka Government Secretariat is a single unit office. Hence, the word "movement" has been used in relation to the members of the Karnataka Government Secretariat Service and not the word "Transfer".

**2.** For the purpose of the movement of the members of the Karnataka Government Secretariat service, the various departments of the Karnataka Government Secretariat are classified into four categories, namely, Development Departments, Regulatory Departments, Service Departments and Technical / Specialist Departments as specified below :-

| **Development Departments** | **Regulatory Departments** | **Service Oriented Departments** | **Technical / Specialized Departments** |
|---|---|---|---|
| 1. Agriculture & Horticulture | 1. Co-operation | 1. Education | 1. Law |
| 2. Animal Husbandry & Fisheries | 2. Personnel and Administrative Reforms (Except Service Rules Wing of D.P.A.R) | 2. Health & Family Welfare | 2. Parliamentary Affairs & Legislation |
| 3. Commerce & Industries | 3. Energy | 3. Housing | 3. Planning & Institutional Finance & Statistics, Science and Technology |
| 4. Women and Child Development | 4. Food, Civil Supplies & Consumer Affairs | 4. Information, Tourism, Youth Services | 4. Information Technology |
| 5. Rural Development & Panchayath Raj | 5. Forest, Environment & Ecology | 5. Infrastructure Development | 5. Service Rules Wing in D.P.A.R. |
| | 6. Home & Transport | 6. Major Irrigation | 6. Finance Department |
| | 7. Kannada & Culture | 7. Medical Education | |
| | 8. Labour | 8. Social Welfare | |
| | 9. Revenue | 9. PublicWorks | |
| | 10. Urban Development | | |

**3.** Each department of the Karnataka Government Secretariat has been allocated work as per the Karnataka Government (Allocation of Business) Rules, 1977. Each department deals with certain distinct activities, Acts, Rules, Regulations etc., allocated to it. A Member of the Karnataka Government Secretariat Service, who is posted to a particular department needs reasonable time to acquaint himself with the work of the department and acquire proficiency and expertise in dealing with the work allocated to him.

**4.** In the background mentioned above, the movement of the members of the Karnataka Government Secretariat Service and their training shall be regulated as prescribed hereunder :-

(a) The minimum tenure in a department shall be as follows :-

| **Post** | **Development Departments** | | **Regulatory Departments** | | **Service Oriented Departments** | | **Technical / Specialized Departments** | |
|---|---|---|---|---|---|---|---|---|
| | **Min.** | **Max.** | **Min.** | **Max.** | **Min.** | **Max.** | **Min.** | **Max.** |
| (1) | (2) | (3) | (4) | (5) | (6) | (7) | (8) | (9) |
| AS/JS/DS | 3 years | 6 years | 3 years | 6 years | 3 years | 6 years | 5 years | No Limit |
| U.Ss. & S.Os. | 3 years | 6 years | 3 years | 6 years | 3 years | 6 years | 5 years | No Limit |
| Sr. Assts/ Assts. | 5 years | 7 years | 5 years | 7 years | 5 years | 7 years | 6 years | No Limit |
| Jr.Assts./ Group-D | 5 years | 7 years | 5 years | 7 years | 5 years | 7 years | 6 years | 7 years |

The tenure referred to above excludes the period of training mentioned in item (b) below :

(b) Every member of the Karnataka Government Secretariat Service holding posts in the cadres of Assistants, Senior Assistants, Section Officers and Under Secretaries shall be deputed to field departments for a period of at least two years within five years of entering each of the said cadres;

Provided that those who have attained the age of 52 years may not be so deputed.

(c ) The Principal Secretary / Secretary to Government concerned can rotate the officers within his department;

(d) In case, however, the Principal Secretary / Secretary to Government desires to surrender to the Department of Personnel and Administrative Reforms, the services of any officer before the completion of the minimum tenure mentioned in para 5 above, he shall record reasons for the same and seek prior clearance of the Department of Personnel and Administrative Reforms for such surrender. However, alleged mis-conduct cannot be a ground to surrender any officer to the Department of Personnel and Administrative Reforms. In such cases, appropriate, disciplinary action should be initiated;

(e) As far as possible, Department of Personnel and Administrative Reforms will ensure that the movement of the members of the Karnataka Government Secretariat Service is within each of the four categories mentioned in para 2 above.

**ANNEXURE - 2**

**DETAILS OF TRANSFERS**

**---------------------------------------------------------- DEPARTMENT**

**For the period from _______ to _________**

| **Sl.No** | | | **1** | **2** | **3** | **4** | **5** |
|---|---|---|---|---|---|---|---|
| **1** | Name of the Department | | | | | | |
| **2.** | Name of the Cadre | | | | | | |
| **3.** | Cadre strength | | | | | | |
| **4.** | Permitted number of transfers | | | | | | |
| **5.** | No.of transfers effected | | | | | | |
| | **i.** | In public interest | | | | | |
| | **ii.** | On request | | | | | |
| | **iii.** | premature transfers | | | | | |
| | **iv.** | delayed transfers | | | | | |
| **6.** | Difference ( 4 – 5 ) | | | | | | |
| **7.** | Reasons for excess transfers if any | | | | | | |
| **8.** | Whether approval of Hon.CM obtained as per the instructions in the Government order. If not reasons to be indicated. | | | | | | |
| **9.** | Remarks of the Head of the Department | | | | | | |

**Signature of Principal Secretary/ Secretary**

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಸೋಮವಾರ, ಜೂನ್ ೧೦, ೨೦೧೩ (ಜ್ಯೇಷ್ಠ ೨೦, ಶಕ ವರ್ಷ ೧೯೩೫) | ನಂ. ೮೨೫ |
| Part – IV-A | Bangalore, Monday, June 10, 2013 (Jyeishta 20, Shaka Varsha 1935) | No. 825 |

## KARNATAKA LEGISLATIVE ASSEMBLY SECRETARIAT

## NOTIFICATION

**No. KLA/LGA/02/LABill/2013, Bangalore, Dated: 10-6-2013**

The following Bill was introduced in Legislative Assembly on 10-6-2013

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಮೊದಲನೇ ಅಧಿವೇಶನ**

## ಕರ್ನಾಟಕ ಪೊಲೀಸು (ತಿದ್ದುಪಡಿ) ವಿಧೇಯಕ, 2013

**(2013ನೇ ಸಾಲಿನ ವಿಧಾನ ಸಭೆಯ ವಿಧೇಯಕ ಸಂಖ್ಯೆ 02)**

ಕರ್ನಾಟಕ ಪೊಲೀಸು ಅಧಿನಿಯಮ, 1963ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕರ್ನಾಟಕ ಪೊಲೀಸು ಅಧಿನಿಯಮ, 1963ನ್ನು (1964ರ ಕರ್ನಾಟಕ ಅಧಿನಿಯಮ 4) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ಪೊಲೀಸು (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

2. **20ಬಿ ಪ್ರಕರಣದ ತಿದ್ದುಪಡಿ.**– ಕರ್ನಾಟಕ ಪೊಲೀಸು ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ 4) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) ಪ್ರಕರಣ 20ಬಿ ಯಲ್ಲಿ,–

(i) (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ, ಅಧಿಸೂಚನೆಯ ಮೂಲಕ, ಪೊಲೀಸು ಮಹಾನಿರ್ದೇಶಕ ಮತ್ತು ಮಹಾನಿರೀಕ್ಷಕನು ಅಧ್ಯಕ್ಷನಾಗಿರುವ ಮತ್ತು ಸರ್ಕಾರವು ನಾಮನಿರ್ದೇಶಿಸುವ ಪೊಲೀಸು ಅಪರ ಮಹಾನಿರ್ದೇಶಕರ ದರ್ಜೆಗಿಂತ ಕಡಿಮೆಯಿಲ್ಲದ, ಮೂವರು ಹಿರಿಯ ಪೊಲೀಸು ಅಧಿಕಾರಿಗಳು ಸದಸ್ಯರಾಗಿರುವ, ಪೊಲೀಸು ಸಿಬ್ಬಂದಿ ಮಂಡಳಿಯನ್ನು ಸ್ಥಾಪಿಸತಕ್ಕದ್ದು. ಪೊಲೀಸು ಅಪರ ಮಹಾನಿರ್ದೇಶಕ (ಆಡಳಿತ) ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.";

(ii) (2)ನೇ ಉಪಪ್ರಕರಣದಲ್ಲಿ (ಸಿ) ಖಂಡವನ್ನು ಬಿಟ್ಟುಬಿಡತಕ್ಕದ್ದು;

(iii) (4)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(4) ಸರ್ಕಾರವು, ಪೊಲೀಸು ಸಿಬ್ಬಂದಿ ಮಂಡಳಿಯ ನಿರ್ಣಯವನ್ನು, ಮಾರ್ಪಾಡು ಮಾಡುವುದಕ್ಕೆ ಕಾರಣಗಳನ್ನು ದಾಖಲಿಸಿದ ತರುವಾಯ, ಮಾರ್ಪಡಿಸಬಹುದು."

3. **20ಎಫ್ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ ಪ್ರಕರಣ 20ಎಫ್ ರಲ್ಲಿ,–

(i) (1)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ವಯೋನಿವೃತ್ತಿಗೆ ಒಳಪಟ್ಟು, ಕಾರ್ಯಾಚರಣೆ ಕರ್ತವ್ಯಗಳ ಮೇಲಿರುವ ಅಥವಾ ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಬಹುದಾದ ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸುತ್ತಿರುವ ಅಧಿಕಾರಿಗಳು, ಕನಿಷ್ಠ ಒಂದು ವರ್ಷದ ಪದಾವಧಿಯನ್ನು ಹೊಂದಿರತಕ್ಕದ್ದು:

ಪರಂತು, ಪೊಲೀಸು ಸಿಬ್ಬಂದಿ ಮಂಡಳಿ ಅಥವಾ ಸಂದರ್ಭಾನುಸಾರವಾಗಿ ಸರ್ಕಾರವು, ಯಾವೊಬ್ಬ ಅಂಥ ಇತರ ಅಧಿಕಾರಿಯನ್ನು, ಕನಿಷ್ಠ ಪದಾವಧಿಯು ಮುಕ್ತಾಯವಾಗುವುದಕ್ಕೆ ಮೊದಲು, ಆತನ ಪದದಿಂದ, ಈ ಮುಂದಿನ ಕಾರಣಗಳಿಗಾಗಿ ಎಂದರೆ:–

(ಎ) ಉನ್ನತ ಹುದ್ದೆಗೆ ಬಡ್ತಿ ಹೊಂದಿದ್ದರೆ; ಅಥವಾ

(ಬಿ) ಕ್ರಿಮಿನಲ್ ಅಪರಾಧದಲ್ಲಿ ನ್ಯಾಯಾಲಯದಿಂದ ನಿರ್ಣೀತ ಅಪರಾಧಿಯಾಗಿದ್ದರೆ ಅಥವಾ ನ್ಯಾಯಾಲಯವು ಆರೋಪಗಳನ್ನು ರೂಪಿಸಿದ್ದರೆ; ಅಥವಾ

(ಸಿ) ಸಂಬಂಧಪಟ್ಟ ಶಿಸ್ತು ಮತ್ತು ಮೇಲ್ಮನವಿ ನಿಯಮಗಳ ಅಡಿಯಲ್ಲಿ ವಜಾ, ತೆಗೆದುಹಾಕುವುದು, ಬಿಡುಗಡೆ ಅಥವಾ ಸೇವೆಯಿಂದ ಕಡ್ಡಾಯ ನಿವೃತ್ತಿ ಅಥವಾ ಕಡಿಮೆ ದರ್ಜೆಗೆ ಇಳಿಸುವ ಶಿಕ್ಷೆಯನ್ನು ವಿಧಿಸುವ ಐತೀರ್ಪನ್ನು ನೀಡಿದ್ದರೆ; ಅಥವಾ

(ಡಿ) ಸದರಿ ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಸೇವೆಯಿಂದ ಅಮಾನತ್ತುಗೊಂಡಿದ್ದರೆ; ಅಥವಾ

(ಇ) ದೈಹಿಕ ಅಥವಾ ಮಾನಸಿಕ ಅನಾರೋಗ್ಯದಿಂದ ಅಥವಾ ಅನ್ಯಥಾ ತನ್ನ ಪ್ರಕಾರ್ಯಗಳನ್ನು ಮತ್ತು ಕರ್ತವ್ಯಗಳನ್ನು ನಿರ್ವಹಿಸಲು ಅಸಮರ್ಥನಾಗಿದ್ದರೆ; ಅಥವಾ

(ಎಫ್) ಬಡ್ತಿ, ವರ್ಗಾವಣೆ ಅಥವಾ ನಿವೃತ್ತಿಯ ಮೂಲಕ ಉಂಟಾದ ಖಾಲಿ ಸ್ಥಾನವನ್ನು ಭರ್ತಿ ಮಾಡುವ ಅಗತ್ಯತೆಯನ್ನು ಹೊಂದಿದ್ದರೆ; ಅಥವಾ

(ಜಿ) ಸಂಬಂಧಪಟ್ಟ ಅಧಿಕಾರಿಯ ಲಿಖಿತ ಕೋರಿಕೆ ಇದ್ದರೆ,

– ವರ್ಗಾವಣೆ ಮಾಡಬಹುದು:

ಮತ್ತು ಪರಂತು, ಸರ್ಕಾರವು, ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ದುರ್ನಡತೆ ಅಥವಾ ಅತೀವ ನಿರ್ಲಕ್ಷ್ಯತೆ ಅಥವಾ ನೈತಿಕ ಅಧ:ಪತನದ ಕೃತ್ಯಕ್ಕಾಗಿ ಒಬ್ಬ ಅಧಿಕಾರಿಯನ್ನು ಆತನ ಕನಿಷ್ಠ ಪದಾವಧಿಯ ಮುಕ್ತಾಯಕ್ಕೆ ಮೊದಲು ಆತನನ್ನು ವರ್ಗಾವಣೆ ಮಾಡಬಹುದು."

(ii) (2)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ವಯೋನಿವೃತ್ತಿಗೊಳಪಟ್ಟು, ಪೊಲೀಸು ಅಪರ ಮಹಾ ನಿರ್ದೇಶಕನು, ಕ್ಷೇತ್ರದಲ್ಲಿ ಕಾರ್ಯಾಚರಣೆ ಕರ್ತವ್ಯದಲ್ಲಿರುವ ಅಥವಾ ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಬಹುದಾದಂಥ ಇತರ ಅಂಥ ಕರ್ತವ್ಯದಲ್ಲಿರುವ ವಲಯದ ಪ್ರಭಾರ ಹೊಂದಿರುವ ಪೊಲೀಸು ಮಹಾ ನಿರೀಕ್ಷಕನು ಅಥವಾ ಪೊಲೀಸು ಅಪರ ಅಧೀಕ್ಷಕನನ್ನೊಳಗೊಂಡಂತೆ ಜಿಲ್ಲೆಯ ಪ್ರಭಾರ ಹೊಂದಿರುವ ಪೊಲೀಸು ಅಧೀಕ್ಷಕನು ಕನಿಷ್ಠ ಒಂದು ವರ್ಷದ ಪದಾವಧಿಯನ್ನು ಹೊಂದತಕ್ಕದ್ದು:

ಪರಂತು, ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ಅತೀವ ದುರ್ನಡತೆ ಅಥವಾ ನಿರ್ಲಕ್ಷ್ಯ ಅಥವಾ ನೈತಿಕ ಅಧ:ಪತನದ ಕೃತ್ಯದ ಕಾರಣಗಳಿಗಾಗಿ ಅಥವಾ (1)ನೇ ಉಪಪ್ರಕರಣದ ಪರಂತುಕಗಳಲ್ಲಿ ನಿರ್ದಿಷ್ಟಪಡಿಸಲಾದ ಸನ್ನಿವೇಶಗಳಡಿಯಲ್ಲಿ ಅಂಥ ಅಧಿಕಾರಿಯನ್ನು ಒಂದು ವರ್ಷದ ಅವಧಿಯೊಳಗೆ ಸರ್ಕಾರವು ವರ್ಗಾವಣೆ ಮಾಡಬಹುದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಪೊಲೀಸು ಸುಧಾರಣೆಗಳ ಸಂಬಂಧದಲ್ಲಿ, ರಿಟ್ ಅರ್ಜಿ ಸಂಖ್ಯೆ: 310/1996ರಲ್ಲಿ (ಶ್ರೀ ಪ್ರಕಾಶ್ ಸಿಂಗ್ ಮತ್ತು ಇತರರು ವಿರುದ್ಧ ಕೇಂದ್ರ ಸರ್ಕಾರ ಮತ್ತು ಇತರರು) ಘನತೆವೆತ್ತ ಭಾರತದ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಪಾಲನೆ ಮಾಡುವುದಕ್ಕಾಗಿ ಮತ್ತು ಪೊಲೀಸು ಸಿಬ್ಬಂದಿ ಮಂಡಳಿಯ ಪರಿಣಾಮಕಾರಿ ಕಾರ್ಯನಿರ್ವಹಣೆಯನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಕರ್ನಾಟಕ ಪೊಲೀಸು ಅಧಿನಿಯಮ, 1963ನ್ನು (1964ರ ಕರ್ನಾಟಕ ಅಧಿನಿಯಮ 4) ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಾಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಕೆ.ಜೆ. ಜಾರ್ಜ್**
ಗೃಹ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

## ಕರ್ನಾಟಕ ಪೊಲೀಸು ಅಧಿನಿಯಮ, 1963ರ (1964ರ ಕರ್ನಾಟಕ ಅಧಿನಿಯಮ 4) ಉದ್ಧೃತ ಭಾಗ

XX XX XX

**20ಬಿ. ಪೊಲೀಸು ಸಿಬ್ಬಂದಿ ಮಂಡಳಿ.–** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಪೊಲೀಸು ಮಹಾನಿರ್ದೇಶಕ ಮತ್ತು ಮಹಾನಿರೀಕ್ಷಕನು ಅಧ್ಯಕ್ಷನಾಗಿರುವ ಮತ್ತು ಪೊಲೀಸು ಅಪರ ಮಹಾನಿರ್ದೇಶಕರ ದರ್ಜೆಗಿಂತ ಕಡಿಮೆಯಿಲ್ಲದ ಪೊಲೀಸು ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಮೂವರು ಜೇಷ್ಠತಮ ಪೊಲೀಸು ಅಧಿಕಾರಿಗಳು ಸದಸ್ಯರಾಗಿರುವ ಪೊಲೀಸು ಸಿಬ್ಬಂದಿ ಮಂಡಳಿಯನ್ನು ಸ್ಥಾಪಿಸತಕ್ಕದ್ದು. ಪೊಲೀಸು ಅಪರ ಮಹಾನಿರ್ದೇಶಕರು (ಆಡಳಿತ) ಇವರು ಸಂಚಾಲಕರಾಗಿರತಕ್ಕದ್ದು.

(2) ಪೊಲೀಸು ಸಿಬ್ಬಂದಿ ಮಂಡಳಿಯು ಈ ಮುಂದಿನ ಪ್ರಕಾರ್ಯಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) 20ಎಫ್ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಇದು ಪೊಲೀಸು ಉಪ ಅಧೀಕ್ಷಕರ ದರ್ಜೆಯ ಮತ್ತು ಕಡಿಮೆ ದರ್ಜೆಯ ಪೊಲೀಸು ಅಧಿಕಾರಿಗಳ ವರ್ಗಾವಣೆಗಳು ಮತ್ತು ನಿಯೋಜನೆಗಳು, ಬಡ್ತಿಗಳು ಮತ್ತು ಇತರೆ ಸೇವಾ ಸಂಬಂಧಿ ವಿಷಯಗಳನ್ನು ನಿರ್ಧರಿಸತಕ್ಕದ್ದು;

(ಬಿ) ಇದು, ನಿಯಮಿಸಲಾದಂತೆ ನೇರ ನೇಮಕಾತಿ ಮತ್ತು ಬಡ್ತಿಗಾಗಿನ ಮೀಸಲಾತಿಯನ್ನು ಮತ್ತು ಕೋಟಾವನ್ನು ಸೂಕ್ತವಾಗಿ ಪರಿಶೀಲಿಸಿದ ತರುವಾಯ, ಪೊಲೀಸು ಉಪ ಅಧೀಕ್ಷಕನ ದರ್ಜೆಯ ಬಡ್ತಿಗೆ ಶಿಫಾರಸ್ಸನ್ನು ಮಾಡತಕ್ಕದ್ದು. ಈ ಉದ್ದೇಶಕ್ಕಾಗಿ, ಸರ್ಕಾರವು ಕಾಲಕಾಲಕ್ಕೆ ನಿಯಮಿಸಬಹುದಾದ ಆದೇಶಗಳು ಅಥವಾ ಮಾರ್ಗದರ್ಶಿ ಸೂತ್ರಗಳ ಅನ್ವಯ ಪೊಲೀಸು ಮಹಾನಿರ್ದೇಶಕ ಮತ್ತು ಪೊಲೀಸು ಮಹಾನಿರೀಕ್ಷಕನು, ಒಂದು ಪ್ರತ್ಯೇಕ ರಿಜಿಸ್ಟರನ್ನು ನಿರ್ವಹಿಸತಕ್ಕದ್ದು;

(ಸಿ) ಪೊಲೀಸು ಅಪರ ಅಧೀಕ್ಷಕರ ದರ್ಜೆಯ ಮತ್ತು ಅದಕ್ಕಿಂತ ಮೇಲಿನ ದರ್ಜೆಯ ಅಧಿಕಾರಿಗಳ ನಿಯೋಜನೆಗಳು ಮತ್ತು ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಸರ್ಕಾರಕ್ಕೆ ಸೂಕ್ತ ಶಿಫಾರಸ್ಸುಗಳನ್ನು ಮಾಡತಕ್ಕದ್ದು;

(ಡಿ) ರಾಜ್ಯದಲ್ಲಿ ಪೊಲೀಸು ಸೇವೆಯ ಕಾರ್ಯನಿರ್ವಹಣೆಯನ್ನು ಸಾಮಾನ್ಯವಾಗಿ ಪರಿಶೀಲಿಸತಕ್ಕದ್ದು;

(ಇ) ನಿಯಮಿಸಬಹುದಾದ ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

(3) ಅದರ ನಿಯಂತ್ರಣ ಮತ್ತು ನಿರ್ದೇಶನಗಳಿಗೆ ಒಳಪಟ್ಟು, ಪೊಲೀಸು ಸಿಬ್ಬಂದಿ ಮಂಡಳಿಯು, ಸಿ ಮತ್ತು ಡಿ ದರ್ಜೆ ನೌಕರರನ್ನು ವರ್ಗಾವಣೆ ಮಾಡಲು ಜಿಲ್ಲೆಯೊಳಗೆ ಪೊಲೀಸು ಅಧೀಕ್ಷಕರನ್ನು ಮತ್ತು ವಲಯದೊಳಗೆ ಪೊಲೀಸು ಮಹಾ ನಿರೀಕ್ಷಕರನ್ನು ಅಧಿಕೃತಗೊಳಿಸಬಹುದು.

(4) ಸರ್ಕಾರವು, ಅಸಾಧಾರಣ ಸಂದರ್ಭಗಳಲ್ಲಿ, ಪೊಲೀಸು ಸಿಬ್ಬಂದಿ ಮಂಡಳಿಯ ನಿರ್ಧಾರವನ್ನು ಮಾರ್ಪಾಡು ಮಾಡುವುದಕ್ಕೆ ಸಂಬಂಧಿಸಿದಂತೆ ತನ್ನ ಕಾರಣಗಳನ್ನು ದಾಖಲಿಸಿದ ತರುವಾಯ ಮಾತ್ರವೇ, ಹಾಗೆ ಮಾರ್ಪಾಟು ಮಾಡಬಹುದು. ಪೊಲೀಸು ಅಪರ ಅಧೀಕ್ಷಕ ದರ್ಜೆಯ ಮತ್ತು ಅದರ ಮೇಲಿನ ದರ್ಜೆಯ ಅಧಿಕಾರಗಳ ನಿಯೋಜನೆಗಳ ಮತ್ತು ವರ್ಗಾವಣೆಗಳ ಬಗ್ಗೆ ಪೊಲೀಸು ಸಿಬ್ಬಂದಿ ಮಂಡಳಿಯು ಮಾಡಿದ ಶಿಫಾರಸ್ಸುಗಳಿಗೆ ಸಂಬಂಧಿಸಿದಂತೆ ಸರ್ಕಾರವು, ಈ ಶಿಫಾರಸ್ಸುಗಳಿಗೆ ಸೂಕ್ತ ಮಾನ್ಯತೆಯನ್ನು ನೀಡತಕ್ಕದ್ದು ಮತ್ತು ಅವುಗಳನ್ನು ಸಾಮಾನ್ಯವಾಗಿ ಒಪ್ಪಿಕೊಳ್ಳತಕ್ಕದ್ದು.

(5) ಪೊಲೀಸು ಸಿಬ್ಬಂದಿ ಮಂಡಳಿಯು ನಿರ್ಧರಿಸಿದ ಮತ್ತು ಜಾರಿಗೆ ತಂದ ವರ್ಗಾವಣೆಗಳು, ಕಟ್ಟುನಿಟ್ಟಾಗಿ 20ಎಫ್ ಪ್ರಕರಣಕ್ಕೆ ಅನುಸಾರವಾಗಿ ಮತ್ತು ಸರ್ಕಾರವು ಕಾಲಕಾಲಕ್ಕೆ ನೀಡಿದ ಸಾಮಾನ್ಯ ವರ್ಗಾವಣೆ ಮಾರ್ಗದರ್ಶಿ ಸೂತ್ರಗಳಿಗೆ ಅನುಸಾರವಾಗಿ ಇರತಕ್ಕದ್ದು.

(6) ದೂರುಗಳ ಮೇಲೆ, ಪೊಲೀಸು ಅಧಿಕಾರಿಗಳ ಅಥವಾ ಸಿಬ್ಬಂದಿಯ ವರ್ಗಾವಣೆಗೆ ಸಂಬಂಧಿಸಿದ ಪ್ರಕರಣಗಳನ್ನು ಪೊಲೀಸು ಸಿಬ್ಬಂದಿ ಮಂಡಳಿಯು ಪರಿಗಣಿಸತಕ್ಕದ್ದು ಮತ್ತು ಈ ಸಂಬಂಧದಲ್ಲಿ ಕೈಗೊಂಡ ಕ್ರಮವನ್ನು ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

(7) ಪೊಲೀಸು ಸಿಬ್ಬಂದಿ ಮಂಡಳಿಯ ನಡವಳಿಗಳ ಪ್ರತಿಗಳನ್ನು ಮತ್ತು ಅವುಗಳ ಮೇಲೆ ಹೊರಡಿಸಲಾದ ವರ್ಗಾವಣೆ ಆದೇಶಗಳನ್ನು ಕೂಡಲೇ ಸರ್ಕಾರಕ್ಕೆ ಕಳುಹಿಸತಕ್ಕದ್ದು.

XX XX XX

**20ಎಫ್. ಪೊಲೀಸ್ ಠಾಣೆಗಳ, ವೃತ್ತದ, ಉಪವಿಭಾಗದ, ಜಿಲ್ಲೆ ಮತ್ತು ವಲಯಗಳ ಪ್ರಭಾರದಲ್ಲಿರುವ ಅಧಿಕಾರಿಗಳ ಪದಾವಧಿ.–** (1) ವಯೋನಿವೃತ್ತಿಗೆ ಒಳಪಟ್ಟು, ಕಾರ್ಯಾಚರಣೆ ಕರ್ತವ್ಯದ ಮತ್ತು ಪೊಲೀಸ್ ಠಾಣೆಯ, ವೃತ್ತದ, ಉಪವಿಭಾಗದ, ಜಿಲ್ಲೆ ಮತ್ತು ವಲಯಗಳ ಪ್ರಭಾರದಲ್ಲಿರುವ ಅಧಿಕಾರಿಗಳು ಕನಿಷ್ಠ ಒಂದು ವರ್ಷಗಳ ಪದಾವಧಿಯನ್ನು ಹೊಂದಿರಬಹುದು:

ಪರಂತು, ಯಾವೊಬ್ಬ ಅಂಥ ಅಧಿಕಾರಿಯನ್ನು, ಪೊಲೀಸ್ ಸಿಬ್ಬಂದಿ ಮಂಡಳಿಯು ಅಥವಾ ಪೊಲೀಸ್ ಸಿಬ್ಬಂದಿ ಮಂಡಳಿಯೊಡನೆ ಸಮಾಲೋಚಿಸಿ ಸರ್ಕಾರವು, ಈ ಮುಂದಿನವುಗಳ ಪರಿಣಾಮವಾಗಿ, ಎಂದರೆ:–

(ಎ) ಉನ್ನತ ಹುದ್ದೆಗೆ ಬಡ್ತಿ ಹೊಂದಿದ್ದರೆ; ಅಥವಾ

(ಬಿ) ಕ್ರಿಮಿನಲ್ ಅಪರಾಧದಲ್ಲಿ ನ್ಯಾಯಾಲಯದಿಂದ ನಿರ್ಣೀತ ಅಪರಾಧಿಯಾಗಿದ್ದರೆ ಅಥವಾ ನ್ಯಾಯಾಲಯವು ಆರೋಪಗಳನ್ನು ರೂಪಿಸಿದ್ದರೆ; ಅಥವಾ

(ಸಿ) ಸಂಬಂಧಪಟ್ಟ ಶಿಸ್ತು ಮತ್ತು ಮೇಲ್ಮನವಿ ನಿಯಮಗಳ ಅಡಿಯಲ್ಲಿ ವಜಾ, ತೆಗೆದುಹಾಕುವುದು, ಬಿಡುಗಡೆ ಅಥವಾ ಸೇವೆಯಿಂದ ಕಡ್ಡಾಯ ನಿವೃತ್ತಿ ಅಥವಾ ಕಡಿಮೆ ದರ್ಜೆಗೆ ಇಳಿಸುವ ಶಿಕ್ಷೆಯನ್ನು ವಿಧಿಸುವ ಐತೀರ್ಪನ್ನು ನೀಡಿದ್ದರೆ; ಅಥವಾ

(ಡಿ) ಸದರಿ ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಸೇವೆಯಿಂದ ಅಮಾನತ್ತುಗೊಂಡಿದ್ದರೆ; ಅಥವಾ

(ಇ) ದೈಹಿಕ ಅಥವಾ ಮಾನಸಿಕ ಅನಾರೋಗ್ಯದಿಂದ ತನ್ನ ಪ್ರಕಾರ್ಯಗಳನ್ನು ಮತ್ತು ಕರ್ತವ್ಯಗಳನ್ನು ನಿರ್ವಹಿಸಲು ಅಸಮರ್ಥನಾಗಿದ್ದರೆ ಅಥವಾ ಅನ್ಯಥಾ ಅಶಕ್ತನಾಗಿದ್ದರೆ; ಅಥವಾ

(ಎಫ್) ಬಡ್ತಿ, ವರ್ಗಾವಣೆ ಅಥವಾ ನಿವೃತ್ತಿಯ ಮೂಲಕ ಉಂಟಾದ ಖಾಲಿ ಸ್ಥಾನವನ್ನು ಭರ್ತಿ ಮಾಡುವ ಅಗತ್ಯತೆಯನ್ನು ಹೊಂದಿದ್ದರೆ; ಅಥವಾ

(ಜಿ) ಸಂಬಂಧಪಟ್ಟ ಅಧಿಕಾರಿಯ ಲಿಖಿತ ಕೋರಿಕೆ ಇದ್ದರೆ,

– ಮೇಲಿನ ಕನಿಷ್ಠ ಪದಾವಧಿಯು ಮುಕ್ತಾಯವಾಗುವುದಕ್ಕೆ ಮೊದಲೇ ಆತನನ್ನು ವರ್ಗಾಯಿಸಬಹುದು:

ಮತ್ತು ಪರಂತು, ಪೊಲೀಸು ಸಿಬ್ಬಂದಿ ಮಂಡಳಿಯೊಂದಿಗೆ ಸಮಾಲೋಚನೆ ನಡೆಸಿದ ತರುವಾಯ ಸರ್ಕಾರವು, ಒಬ್ಬ ಅಧಿಕಾರಿಯನ್ನು ದುರ್ನಡತೆ ಅಥವಾ ಅತೀವ ನಿರ್ಲಕ್ಷತೆ ಅಥವಾ ನೈತಿಕ ಅಧ:ಪತನದ ಕೃತ್ಯಗಳ ಕಾರಣದಿಂದಾಗಿ ಆತನ ಪದಾವಧಿಯು ಮುಕ್ತಾಯವಾಗುವುದಕ್ಕೆ ಮೊದಲೇ ಆತನನ್ನು ವರ್ಗಾಯಿಸಬಹುದು.

(2) ವಯೋನಿವೃತ್ತಿಗೆ ಒಳಪಟ್ಟು, ಕ್ಷೇತ್ರದಲ್ಲಿನ ಕಾರ್ಯನಿರ್ವಹಣಾ ಕರ್ತವ್ಯಗಳ ಮೇಲಿರುವಂಥ ಪೊಲೀಸು ಅಪರ ಅಧೀಕ್ಷಕನೂ ಒಳಗೊಂಡಂತೆ, ವಲಯದ ಪ್ರಭಾರದಲ್ಲಿರುವ ಪೊಲೀಸು ಮಹಾ ನಿರೀಕ್ಷಕನು ಅಥವಾ ಜಿಲ್ಲೆಯ ಪ್ರಭಾರದಲ್ಲಿರುವ ಪೊಲೀಸು ಅಧೀಕ್ಷಕನು, ಕನಿಷ್ಠ ಒಂದು ವರ್ಷಗಳ ಪದಾವಧಿಯನ್ನು ಹೊಂದಿರತಕ್ಕದ್ದು:

ಪರಂತು, ಸರ್ಕಾರವು, ತೀವ್ರ ದುರ್ನಡತೆ ಅಥವಾ ನಿರ್ಲಕ್ಷತೆ ಅಥವಾ ನೈತಿಕ ಅಧ:ಪತನದ ಕಾರಣಗಳಿಗಾಗಿ ಅಥವಾ (1)ನೇ ಉಪ ಪ್ರಕರಣದ ಪರಂತುಕದಲ್ಲಿ ಹೇಳಿದ ಸಂದರ್ಭಗಳಡಿಯಲ್ಲಿ ಮೇಲಿನ ಪ್ರವರ್ಗದ ಅಧಿಕಾರಿಯನ್ನು ಒಂದು ವರ್ಷಗಳ ಅವಧಿಯೊಳಗೆ ವರ್ಗಾಯಿಸಬಹುದು.

XX XX XX

## KARNATAKA LEGISLATIVE ASSEMBLY

## FOURTEENTH LEGISLATIVE ASSEMBLY

## FIRST SESSION

# THE KARNATAKA POLICE (AMENDMENT) BILL, 2013

## (L.A. Bill No. 02 of 2013)

A Bill further to amend the Karnataka Police Act, 1963.

Whereas it is expedient further to amend the Karnataka Police Act, 1963 (Karnataka Act No. 4 of 1964) for the purposes hereinafter appearing;

Be it enacted by the Karnataka State Legislature in the sixty-fourth year of the Republic of India, as follows:-

**1. Short title and commencement.**- (1) This Act may be called the Karnataka Police (Amendment) Act, 2013.

(2) It shall come into force at once.

**2. Amendment of section 20 B.-** In the Karnataka Police Act, 1963 (Karnataka Act 4 of 1964) (hereinafter referred to as the principal Act), in section 20B,-

(i) for sub-section (1), the following shall be substituted, namely:-

" (1) The State Government shall, by notification in the official Gazette, establish a Police Establishment Board with the Director General and Inspector General of Police as Chairman and three senior police officers not below the rank of Additional Director General of Police as members to be nominated by the Government. Additional Director General of Police (Administration) shall be the Member Secretary";

(ii) in sub-section (2), clause (c) shall be omitted;

(iii) for sub-section (4), the following shall be substituted, namely:-

"(4) The Government may modify the decision of the Police Establishment Board after recording its reasons for doing so."

**3. Amendment of section 20 F.-** In section 20F of the principal Act,-

(i) for sub-section (1), the following shall be substituted, namely:-

"(1) Subject to superannuation, the officers who are in operational duties or such other duties as may be notified by the Government from time to time shall have a minimum tenure of one year:

Provided that any such officer may be transferred by the Police Establishment Board or by the Government as the case may be from his post before the expiry of the minimum tenure consequent upon,-

(a) promotion to a higher post; or

(b) on conviction, or charges having been framed by a court of Law in a criminal offence; or

(c) imposition of punishment of dismissal, removal, discharge or compulsory retirement from service or of reduction to a lower rank awarded under the relevant discipline and appeal rules; or

(d) suspension from the service in accordance with the provisions of the said rules; or

(e) incapacitation by physical or mental illness or otherwise becoming unable to discharge his functions and duties; or

(f) the need to fill up a vacancy caused by promotion, transfer or retirement; or

(g) on request of the officer concerned in writing:

Provided further that the Government may, transfer an officer before the expiry of his minimum tenure on account of misconduct or gross negligence or an act of moral turpitude in the opinion of the State Government".

(ii) for sub-section (2), the following shall be substituted, namely:-

"(2) Subject to superannuation, the Additional Director General of Police, the Inspector General of Police in charge of Range or Superintendent of Police in charge of a District including Additional Superintendent of Police who are on operational duties in the field or such other duties as may be notified by the Government from time to time shall have a minimum tenure of one year:

Provided that the Government may transfer such officer within a period of one year for reasons of gross misconduct or negligence or an act of moral turpitude in the opinion of the State Government or under circumstances specified in the provisos to sub-section (1)".

## STATEMENT OF OBJECTS AND REASONS

It is considered necessary to amend the Karnataka Police Act, 1963 (Karnataka Act 4 of 1964) in order to comply with the directions of Hon'ble Supreme Court of India in Writ Application No. 310/1996 (Sri. Prakash Singh and others V/s Union of India and others) in respect of Police Reforms and to ensure effective functioning of the Police Establishment Board.

Hence, the Bill.

## FINANCIAL MEMORANDUM

There is no extra expenditure involved in the proposed Legislative measure.

**K.J. GEORGE**
Minister for Home

**P. OMPRAKASHA**
Secretary
Karnataka Legislative Assembly

## ANNEXURE

### Extract from the Karnataka Police Act, 1963 (Karnataka Act No. 4 of 1964)

XXX XXX XXX

**20B. Police Establishment Board.-** (1) The State Government shall, by notification in the official Gazette, establish a Police Establishment Board with the Director General and Inspector General of Police as Chairman and three senior most police officers not below the rank of Additional Director General of Police working within the police department as members. Additional Director General of Police (Administration) shall be the convener.

(2) The functions of the Police Establishment Board shall be as follows, namely:-

(a) Subject to the provisions of section 20F, it shall decide on transfers, postings, promotions and other service related matters of officers of and below the rank of Deputy Superintendent of Police.

(b) It shall also make recommendation for promotion to the rank of Deputy Superintendents of Police after duly verifying reservation and quota prescribed for direct recruitment and promotion. For this purpose a separate register shall be maintained by Director General and Inspector General of Police, as per orders or guidelines prescribed by Government from time to time.

(c) It shall make appropriate recommendations to the Government regarding postings and transfers of officers of and above the rank of Additional Superintendent of Police.

(d) Generally review the functioning of the police force in the State.

(e) Perform such other functions as may be prescribed.

(3) Subject to its control and directions, the Police Establishment Board may authorize the Superintendent of Police to effect transfers of Group C and D officials within the district and the Inspector General of Police within the Range.

(4) The Government may modify the decision of the Police Establishment Board in exceptional cases only after recording its reasons for doing so. The Government shall give due weightage and shall normally accept the recommendations made by the Board, regarding postings and transfers of officers of and above the rank of Additional Superintendent of Police.

(5) The transfers decided and effected by the Police establishment Board shall be strictly in accordance with section 20F and the general transfer guidelines issued by Government from time to time.

(6) The cases pertaining to transfer of Police officers or personnel on complaints shall be considered by the Police Establishment Board and action taken in this regard shall be reported to Government.

(7) Copies of proceedings of the Police Establishment Board and the transfer orders issued thereon shall be sent to Government forthwith.

XXX XXX XXX

**20F. Tenure of officers incharge of police stations, circle, sub-division, district and range -** (1) Subject to superannuation, the officers who are in operational duties and incharge of Police station, Circle, Sub-division may have a minimum tenure of one year:

Provided that any such officer may be transferred by the Police Establishment Board or by the Government in consultation with the Police Establishment Board, from his post before the expiry of the above minimum tenure consequent upon,-

(a) promotion to a higher post; or

(b) on conviction, or charges having been framed by a court of Law in a criminal offence;

(c) imposition of punishment of dismissal, removal, discharge or compulsory retirement from service or of reduction to a lower rank awarded under the relevant discipline and Appeal Rules; or

(d) suspension from the Service in accordance with the provisions of the said rules; or

(e) incapacitation by physical or mental illness or otherwise becoming unable to discharge his functions and duties; or

(f) the need to fill up a vacancy caused by promotion, transfer or retirement; or

(g) on request of the officer concerned in writing:

Provided further that the Government may, after consultation with the Police Establishment Board, may transfer an officer before the expiry of his tenure on account of misconduct or gross negligence or an act of moral turpitude.

(2) Subject to superannuation, the Inspector General of Police in charge of Range or Superintendent of Police in charge of a District including Additional Superintendent of Police who are on operational duties in the field shall have a minimum tenure of one year:

Provided that the Government may transfer an officer of the above category within a period of one year for reasons of gross misconduct or negligence or an act of moral turpitude or under circumstances enumerated in the proviso to sub-section (1).

XXX XXX XXX



# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜೂನ್ ೧೧, ೨೦೧೩ (ಜ್ಯೇಷ್ಠ ೨೧, ಶಕ ವರ್ಷ ೧೯೩೫) | ನಂ. ೮೨೬ |
|---|---|---|
| Part – IV-A | Bangalore, Tuesday, June 11, 2013 (Jyeishta 21, Shaka Varsha 1935) | No. 826 |


## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ನಅಇ 98 ಎಂಎಲ್ಆರ್ 2013(ಭಾಗ–7), ಬೆಂಗಳೂರು, ದಿನಾಂಕ: 10.06.2013**

1979ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ) ನಿಯಮಾವಳಿಯ 68ನೇ ನಿಯಮದೊಂದಿಗೆ ಓದಲಾದ 1976ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ನಿಯಮಗಳ ಅಧಿನಿಯಮ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ: 14)ರ 32ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ, ದಿನಾಂಕ: 07.03.2013ರಂದು ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಗುಲ್ಬರ್ಗಾ ಮಹಾನಗರಪಾಲಿಕೆಯ ಚುನಾಯಿತರಾದ ಅಭ್ಯರ್ಥಿಗಳ ಹೆಸರುಗಳನ್ನು ಈ ಮೂಲಕ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ದಿನಾಂಕ: 07–03–2013 ರಂದು ಗುಲ್ಬರ್ಗಾ ಮಹಾನಗರಪಾಲಿಕೆಗೆ ನಡೆದ ಚುನಾವಣೆಯಲ್ಲಿ ಆಯ್ಕೆಯಾದ ಸದಸ್ಯರ ವಿವರಗಳು**

| ವಾರ್ಡ್ ಸಂಖ್ಯೆ | ಆಯ್ಕೆಯಾದ ಸದಸ್ಯರ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಮೀಸಲಾತಿ | ಪಕ್ಷ |
|---|---|---|---|
| 1 | ಪುತಲಿ ಬೇಗಂ,<br>ಮ.ನಂ.ಟಿ–8–1544/49/ಎ ತಾಜ ನಗರ ಫಿಲ್ಟರ್ ಬೆಡ್ ರಸ್ತೆ, ಗುಲ್ಬರ್ಗಾ. | ಸಾಮಾನ್ಯ ಮಹಿಳೆ | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

